# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಡಿಸೆಂಬರ್ ೨೦, ೨೦೧೨ (ಮಾರ್ಗಶಿರ ೨೯, ಶಕ ವರ್ಷ ೧೯೩೪) | ಸಂಚಿಕೆ ೫೦ |
|---|---|---|



## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಜಲಸಂಪನ್ಮೂಲ ಸಚಿವಾಲಯ

**ವಿಷಯ** : ಬೆಳಗಾವಿ ಜಿಲ್ಲೆ, ಸವದತ್ತಿ ತಾಲ್ಲೂಕು ಸತ್ತಿಗೇರಿ ಮತ್ತು ಕೊಡ್ಲಿವಾಡ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ಆದೇಶದಂತೆ ಪಾವತಿಸಬೇಕಾದ ಹೆಚ್ಚಿನ ಪರಿಹಾರಧನದ ಬಾಕಿ ಮೊತ್ತ ಪಾವತಿಸುವ ಕುರಿತು.

**ಓದಲಾಗಿದೆ** :

1. ಸರ್ಕಾರದ ಆದೇಶ ಸಂಖ್ಯೆ : ಸನೀಇ 161 ಭೂಸ್ವಾಪ್ರ 2011, ದಿನಾಂಕ : 30–3–2012.
2. ಶ್ರೀ ಬಿ.ಸಿ. ಬೆಲ್ಲದ್, ವಕೀಲರು, ಬೆಳಗಾಂ ಇವರ ಪತ್ರ ದಿನಾಂಕ : 20–4–2012.

**ಪ್ರಸ್ತಾವನೆ :**

ಬೆಳಗಾವಿ ಜಿಲ್ಲೆ, ಸವದತ್ತಿ ತಾಲ್ಲೂಕಿನ ಸತ್ತಿಗೇರಿ ಮತ್ತು ಕೊಡ್ಲಿವಾಡ ಗ್ರಾಮದ ಸಣ್ಣ ನೀರಾವರಿ ಕೆರೆಗಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ ಸಂಖ್ಯೆ 46, 47 ಮತ್ತು 51/2009ರಲ್ಲಿ ನೀಡಿದ ತೀರ್ಪಿನಂತೆ ರೂ. 19,28,098/–ಗಳ ಪರಿಹಾರಧನ ಬಿಡುಗಡೆ ಮಾಡಲು ಕೋರಿ ಮುಖ್ಯ ಅಭಿಯಂತರರು, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪ್ರಸ್ತಾವನೆಯನ್ನು ಪರಿಶೀಲಿಸಿ ಮೇಲೆ (1)ರಲ್ಲಿ ಓದಲಾದ ದಿನಾಂಕ : 30–3–2012 ರ ಸರ್ಕಾರದ ಆದೇಶದಲ್ಲಿ ರೂ. 15,16,169/–ಗಳನ್ನು ಬಿಡುಗಡೆ ಮಾಡಲಾಗಿತ್ತು. ಪ್ರಕರಣದ ಭೂಮಾಲೀಕರ ಪರ ವಕೀಲರು ಮೇಲೆ (2) ರಲ್ಲಿ ಓದಲಾದ ದಿನಾಂಕ : 20–4–12ರ ಪತ್ರದಲ್ಲಿ ಬಾಕಿ ಮೊತ್ತವನ್ನು ಬಿಡುಗಡೆ ಮಾಡುವಂತೆ ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ. ಈ ಮನವಿಯ ಬಗ್ಗೆ ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲು ಸರ್ಕಾರವು ನಿರ್ಧರಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 83 ಭೂಸ್ವಾಪ್ರ 2012, ಬೆಂಗಳೂರು, ದಿನಾಂಕ : 25ನೇ ಸೆಪ್ಟೆಂಬರ್ 2012.**

ಬೆಳಗಾಂ ಜಿಲ್ಲೆ, ಸವದತ್ತಿ ತಾಲ್ಲೂಕಿನ ಸತ್ತಿಗೇರಿ ಮತ್ತು ಕೊಡ್ಲಿವಾಡ ಗ್ರಾಮದ ಸಣ್ಣ ನೀರಾವರಿ ಕೆರೆಗಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ಆದೇಶದಂತೆ ಪಾವತಿಸಬೇಕಾದ ಹೆಚ್ಚಿನ ಪರಿಹಾರ ಮೊತ್ತ ಬಾಕಿ ಮೊತ್ತ ರೂ. 4,11,929/– (ನಾಲ್ಕು ಲಕ್ಷದ ಹನ್ನೊಂದು ಸಾವಿರದ ಒಂಭೈನೂರ ಇಪ್ಪತ್ತೊಂಬತ್ತು ರೂ.ಗಳು ಮಾತ್ರ) ಗಳನ್ನು ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿನ ಷರತ್ತುಗಳೊಂದಿಗೆ ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ.

ಈ ವೆಚ್ಚವನ್ನು 2012–13ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ. 4,11,929/– ಗಳನ್ನು ಹಂಚಿಕೆ ಮಾಡಿ, ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ : 20–10–10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

**P.R. 2104**

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯ ವಕೀಲರ ಕ್ಷೇಮಾಭಿವೃದ್ಧಿ ನಿಧಿಗೆ 2012–13 ನೇ ಸಾಲಿನಲ್ಲಿ ಅನುದಾನವನ್ನು ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಲಾ 54 ಎಲ್‌ಎಎಂ 2012, ದಿನಾಂಕ : 17–4–2012.
2. ಸರ್ಕಾರದ ಆದೇಶ ಸಂಖ್ಯೆ : ಲಾ 138 ಎಲ್‌ಸಿಎಲ್ 2012, ದಿನಾಂಕ : 29–5–2012.
3. ಸರ್ಕಾರದ ಆದೇಶ ಸಂಖ್ಯೆ : ಲಾ 139 ಎಲ್‌ಸಿಎಲ್ 2012, ದಿನಾಂಕ : 30–5–2012.
4. ಅಧ್ಯಕ್ಷರು ಕರ್ನಾಟಕ ರಾಜ್ಯ ವಕೀಲರ ಪರಿಷತ್ತು ಇವರ ಪತ್ರ ದಿನಾಂಕ : 27–7–2012, 22–9–2012 ಮತ್ತು 24–9–2012.

**ಪ್ರಸ್ತಾವನೆ :**

ಕರ್ನಾಟಕ ರಾಜ್ಯ ವಕೀಲರ ಕ್ಷೇಮಾಭಿವೃದ್ಧಿ ನಿಧಿಗೆ 2012–13ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2014–00–114–0–03 (ಯೋಜನೆ) ಯಡಿ ರೂ. 50 ಲಕ್ಷ ಆಯವ್ಯಯ ಅವಕಾಶವಿದ್ದು ಮುಂದುವರಿದ ಯೋಜನೆಯಡಿ ಸದರಿ ಯೋಜನೆಯನ್ನು ಮುಂದುವರಿಸಲು ಮೇಲೆ (1) ರಲ್ಲಿ ಓದಲಾದ ದಿನಾಂಕ : 17–4–2012ರ ಆದೇಶದಲ್ಲಿ ಮಂಜೂರಾತಿ ನೀಡಿದೆ. ಮೇಲೆ ಓದಲಾದ (2) ಮತ್ತು (3) ರ ಆದೇಶ ದಿನಾಂಕ : 29–5–2012 ಮತ್ತು 30–5–2012ರಲ್ಲಿ ಸರ್ಕಾರಿ ವಕೀಲರ ಕಾರ್ಯಾಗಾರ ಸಭೆಯ ಆಯೋಜನೆಗೆ ರೂ. 4,00,000/– ಲಕ್ಷ ಹಾಗೂ ರಾಜ್ಯದ 180 ವಕೀಲರ ಸಂಘಗಳಿಗೆ ಜೆರಾಕ್ಸ್ ಯಂತ್ರವನ್ನು ವಿತರಿಸುವ ಸಂಬಂಧ ರೂ. 47,000/– ಗಳನ್ನು ಕರ್ನಾಟಕ ರಾಜ್ಯ ವಕೀಲರ ಕ್ಷೇಮಾಭಿವೃದ್ಧಿ ನಿಧಿಗೆ ಲೆಕ್ಕ ಶೀರ್ಷಿಕೆ 2014–00–114–0–03–104 ವಕೀಲರ ಕಲ್ಯಾಣ ನಿಧಿ ಯೋಜನೆಯಡಿ ಒದಗಿಸಿರುವ ರೂ. 50.00/– ಲಕ್ಷಗಳ ಆಯವ್ಯಯದಲ್ಲಿಯೆ ಭರಿಸಲಾಗಿದೆ. ಉಳಿಕೆ ರೂ. 46.53 ಲಕ್ಷ ಬಾಕಿ ಇರುತ್ತದೆ.

ಸದರಿ ಮೇಲೆ (4) ರಲ್ಲಿ ಓದಲಾದ ದಿನಾಂಕ : 27–7–2012 ರ ಪತ್ರದಲ್ಲಿ ಅಧ್ಯಕ್ಷರು ಕರ್ನಾಟಕ ರಾಜ್ಯ ವಕೀಲರ ಪರಿಷತ್ತು ಇವರು ವಕೀಲರ ಕ್ಷೇಮಾಭಿವೃದ್ಧಿ ನಿಧಿಗಾಗಿ ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಮೇಲ್ಕಂಡ ಯೋಜನೆಯಡಿ ಒದಗಿಸಿರುವ ಅನುದಾನದಲ್ಲಿಯೆ ರೂ. 25.00 ಲಕ್ಷಗಳನ್ನು ಬಿಡುಗಡೆ ಮಾಡಲು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಲಾ 145 ಎಲ್‌ಸಿಎಲ್ 2012, ಬೆಂಗಳೂರು, ದಿನಾಂಕ : 4–10–2012.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕರ್ನಾಟಕ ರಾಜ್ಯ ವಕೀಲರ ಕ್ಷೇಮಾಭಿವೃದ್ಧಿ ನಿಧಿಗೆ ಲೆಕ್ಕ ಶೀರ್ಷಿಕೆ 2014–00–114–0–03 (Lawyers Welfare fund) ಯೋಜನೆಯಡಿ ರೂ. 25.00 ಲಕ್ಷಗಳನ್ನು (ರೂಪಾಯಿ ಇಪ್ಪತ್ತೈದು ಲಕ್ಷಗಳು ಮಾತ್ರ) ಈ ಕೆಳಕಂಡ ಷರತ್ತಿಗೊಳಪಟ್ಟು ಕರ್ನಾಟಕ ರಾಜ್ಯ ವಕೀಲರ ಪರಿಷತ್ತಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಹಣವನ್ನು ವಕೀಲರ ಸಂಘಗಳಿಗೆ ಸಹಾಯಾನುದಾನ ನಿಯಮಾವಳಿಯಲ್ಲಿ ಸ್ಪಷ್ಟಪಡಿಸಿರುವಂತೆ ವಕೀಲರ ಪರಿಷತ್ತು, ಅಡ್ವೋಕೇಟ್ ಜನರಲ್, ಕರ್ನಾಟಕ ಉಚ್ಚನ್ಯಾಯಾಲಯರವರಿಗೆ ಬಿಲ್ಲನ್ನು ಸಲ್ಲಿಸಿ ಹಣ ಪಾವತಿಸಿಕೊಳ್ಳಬಹುದಾಗಿರುತ್ತದೆ.

1. ಅನುದಾನವನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ನಿಯಮಾನುಸಾರ ಬಳಸತಕ್ಕದ್ದು.
2. ಬಳಕೆ ಪ್ರಮಾಣ ಪತ್ರವನ್ನು ವಕೀಲರ ಪರಿಷತ್ತಿನಿಂದ ಅಂಕಿ ಅಂಶಗಳ ಸಹಿತ ಪಡೆದು ಕಾಲಮಿತಿಯೊಳಗೆ ನಿಯಮಾನುಸಾರ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ : ವನಇ 490 ಆಂಆಬಿ 2012, ದಿನಾಂಕ : 11–9–2012ರ ಸಹಮತಿ ಹಾಗೂ ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 4 ಟಿಎಫ್‌ಪಿ 2012 ದಿನಾಂಕ : 27–4–2012ರ ಭಾಗ–3 ಕ್ರಮ ಸಂಖ್ಯೆ : 8 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಕೆ. ಲಕ್ಷ್ಮೀನರಸಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2) (ಪ್ರ),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**P.R. 2105**

## ಒಳಾಡಳಿತ ಸಚಿವಾಲಯ

**ವಿಷಯ** : SIMI ವಿರುದ್ಧ ಕಾನೂನು ಬಾಹಿರ ಚಟುವಟಿಕೆಗಳ (ತಡೆಗಟ್ಟುವಿಕೆ) ನ್ಯಾಯಮಂಡಳಿಯಲ್ಲಿ ಸರ್ಕಾರದ ಪರವಾಗಿ ವಾದ ಮಂಡಿಸಿದ ಶ್ರೀ ಹೆಚ್.ಎನ್. ನಿಲೋಗಲ್, ವಕೀಲರು, ವಿಶೇಷ ಅಭಿಯೋಜಕರು ಇವರಿಗೆ ಸಂಭಾವನೆ ಮಂಜೂರು ಮಾಡುವ ಕುರಿತು.

**ಓದಲಾಗಿದೆ :**

1. ಆರಕ್ಷಕ ಮಹಾ ನಿರೀಕ್ಷಕರು (ರಾಜ್ಯ ಗುಪ್ತವಾರ್ತೆ), ಬೆಂಗಳೂರು ಅವರ ದಿನಾಂಕ: 10–4–2012ರ ಪತ್ರ ಸಂಖ್ಯೆ : 91/ಎಟಿಸಿ–4/2012.
2. ದಿನಾಂಕ : 13–4–2012ರ ಸರ್ಕಾರದ ಅಧಿಸೂಚನೆ ಸಂಖ್ಯೆ : ಹೆಚ್‌ಡಿ 302 ಎಸ್‌ಎಸ್‌ಟಿ 2011.
3. ಶ್ರೀ ಹೆಚ್.ಎನ್. ನಿಲೋಗಲ್, ವಿಶೇಷ ಸರ್ಕಾರಿ ಅಭಿಯೋಜಕರು ಅವರ ದಿನಾಂಕ : 31–5–2012ರ ಮನವಿ.

**ಪ್ರಸ್ತಾವನೆ :**

ಆರಕ್ಷಕ ಮಹಾ ನಿರೀಕ್ಷಕರು (ರಾಜ್ಯ ಗುಪ್ತವಾರ್ತೆ) ಬೆಂಗಳೂರು ಅವರು ಮೇಲೆ (1) ರಲ್ಲಿ ಓದಲಾದ ದಿನಾಂಕ : 10–4–2012ರ ಪತ್ರದಲ್ಲಿ ಕೇಂದ್ರ ಸರ್ಕಾರವು SIMI ಸಂಸ್ಥೆಯನ್ನು ಕಾನೂನು ಬಾಹಿರ ಸಂಸ್ಥೆಯೆಂದು ಘೋಷಿಸಿರುವುದೆಂದು ತಿಳಿಸಿರುತ್ತಾರೆ. ಶ್ರೀ ಹೆಚ್.ಎನ್. ನಿಲೋಗಲ್, ವಕೀಲರು, ಬೆಂಗಳೂರು ಇವರು ಹಿಂದೆ ದೀನ್‌ದಾರ್–ಅಂಜುಮಾನ್ ಹಾಗೂ SIMI ಸಂಸ್ಥೆಗಳ ವಿರುದ್ಧ ರಾಜ್ಯ ಸರ್ಕಾರದ ಪರವಾಗಿ ಕಾನೂನುಬಾಹಿರ ಚಟುವಟಿಕೆಗಳು (ತಡೆಗಟ್ಟುವಿಕೆ) ನ್ಯಾಯಮಂಡಳಿಯ ಮುಂದೆ ಸಮರ್ಥವಾಗಿ ವಾದ ಮಂಡಿಸಿರುವುದಾಗಿ ತಿಳಿಸಿ, ಅವರನ್ನು ಸದರಿ ಪ್ರಕರಣದಲ್ಲಿ ವಿಶೇಷ ಅಭಿಯೋಜಕರಾಗಿ ನೇಮಿಸುವಂತೆ ಕೋರಿದ್ದರ ಹಿನ್ನೆಲೆಯಲ್ಲಿ ಮೇಲೆ (2)ರಲ್ಲಿ ಓದಲಾದ ದಿನಾಂಕ : 13–4–2012ರ ಅಧಿಸೂಚನೆಯಲ್ಲಿ ಶ್ರೀ ಹೆಚ್.ಎನ್. ನಿಲೋಗಲ್, ವಕೀಲರು ಅವರನ್ನು SIMI ವಿರುದ್ಧ ಕಾನೂನುಬಾಹಿರ ಚಟುವಟಿಕೆಗಳು (ತಡೆಗಟ್ಟುವಿಕೆ) ನ್ಯಾಯಾಮಂಡಳಿಯಲ್ಲಿ ರಾಜ್ಯ ಸರ್ಕಾರದ ಪರವಾಗಿ ವಾದ ಮಂಡಿಸಲು ವಿಶೇಷ ಅಭಿಯೋಜಕರನ್ನಾಗಿ ಸರ್ಕಾರವು ನೇಮಿಸಿ ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಶ್ರೀ ಹೆಚ್.ಎನ್. ನಿಲೋಗಲ್, ವಕೀಲರು, ಬೆಂಗಳೂರು ಅವರು ತಮಗೆ ಸಂಭಾವನೆಯನ್ನು ನಿಗಧಿಪಡಿಸುವಂತೆ ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 302 ಎಸ್‌ಎಸ್‌ಟಿ 2011, ಬೆಂಗಳೂರು, ದಿನಾಂಕ : 5–10–2012.**

ಮೇಲ್ಕಂಡ ವಿವರಗಳ ಹಿನ್ನೆಲೆಯಲ್ಲಿ ಶ್ರೀ ಹೆಚ್.ಎನ್. ನಿಲೋಗಲ್, ವಕೀಲರು, ಬೆಂಗಳೂರು ಅವರು SIMI ವಿರುದ್ಧದ ಪ್ರಕರಣದಲ್ಲಿ ಕಾನೂನುಬಾಹಿರ ಚಟುವಟಿಕೆಗಳು (ತಡೆಗಟ್ಟುವಿಕೆ) ನ್ಯಾಯಮಂಡಳಿಯ ಮುಂದೆ ರಾಜ್ಯ ಸರ್ಕಾರದ ಪರವಾಗಿ ವಿಶೇಷ ಅಭಿಯೋಜಕರಾಗಿ ಕರ್ತವ್ಯ ನಿರ್ವಹಿಸುವ ದಿನಾಂಕಗಳಂದು ಈ ಕೆಳಕಂಡ ಸಂಭಾವನೆಯನ್ನು ಸರ್ಕಾರವು ನಿಗಧಿಪಡಿಸಿದೆ.

| ಕ್ರ. ಸಂ. | ಸಂಭಾವನೆಯ ವಿವರ | ಮೊತ್ತ |
|---|---|---|
| 1. | Reading Fee | ₹. 020000-00 |
| 2. | Effective hearing per day | ₹. 02000-00 |
| 3. | Non-effective hearing per day | ₹. 01000-00 |
| 4. | Miscellaneous expenses | ₹. 0.5000-00 |

ದಿನಾಂಕ : 18–8–2012ರ ಸರ್ಕಾರಿ ಆದೇಶವನ್ನು ಭಾಗಶಃ ಮಾರ್ಪಡಿಸಿದೆ. ಸದರಿ ವೆಚ್ಚವನ್ನು "ಲೆಕ್ಕ ಶೀರ್ಷಿಕೆ 2014, Administration of Justice-114, Legal Advisors and Counsels-01, Advocate General, Payment for Professional and Special Services in the Budget" ರಡಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಆಇ 3 ಟಿಎಫ್‌ಪಿ 2011, ದಿನಾಂಕ : 27–1–2012ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳಿಗೆ ಅಧಿಕಾರ ಪ್ರತ್ಯಾಯೋಜಿಸಿದ ರೀತ್ಯಾ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪ್ರಕಾಶ್, ವೈ.ಕೆ.**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ).

P.R. 2106

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಕೊಪ್ಪಳ ಜಿಲ್ಲೆ ಮತ್ತು ತಾಲ್ಲೂಕಿನ ಕಾಮನೂರು ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ : 29–8–2012ರ ಪತ್ರ ಸಂಖ್ಯೆ : ಮುಇಂ/ಸನೀ(ಉ)ವ/ ಬಿಜೆಪಿ/ಭೂಸ್ವಾಪ್ರ/2012–13/4892.

**ಪ್ರಸ್ತಾವನೆ :**

ಕೊಪ್ಪಳ ಜಿಲ್ಲೆ ಮತ್ತು ತಾಲ್ಲೂಕಿನ ಕಾಮನೂರು ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಕಾಮನೂರು ಗ್ರಾಮದ ಜಮೀನುಗಳಿಗೆ ನ್ಯಾಯಾಲಯವು ನೀಡಿದ ತೀರ್ಪಿನಂತೆ ಹೆಚ್ಚಿನ ಪರಿಹಾರ ಧನ ಪಾವತಿಸಲು ರೂ. 5,84,142/–ಗಳನ್ನು ಬಿಡುಗಡೆ ಮಾಡುವಂತೆ ಕೋರಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿದ್ದಾರೆ. ಭೂಸ್ವಾಧೀನ ಪ್ರಕ್ರಿಯೆಯ ವಿವರಗಳು ಕೆಳಕಂಡಂತಿವೆ.

- ಭೂಸ್ವಾಧೀನ ಕಾಯ್ದೆ ಕಲಂ 4(1) ರ ಅಧಿಸೂಚನೆ ದಿನಾಂಕ : 12–4–07
- ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ರಚಿಸಿದ ದಿನಾಂಕ : 8–7–10.

ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಂತೆ ಪರಿಹಾರ ಧನ ಪಡೆದ ಭೂಮಾಲೀಕರು ಹೆಚ್ಚಿನ ಪರಿಹಾರ ಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಕೊಪ್ಪಳ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಎಲ್.ಎ.ಸಿ. ಮುಖ್ಯ ಪ್ರಕರಣ ಸಂಖ್ಯೆ : 22/11 (Clbbed cases 18–21/11)ನ್ನು ದಾಖಲಿಸಿದ್ದು, ಸಿವಿಲ್ ನ್ಯಾಯಾಲಯವು ಮುಖ್ಯ ಪ್ರಕರಣ ಸಂಖ್ಯೆ : 22/11 ರಲ್ಲಿ ದಿನಾಂಕ : 5–11–11 ರಂದು ನೀಡಿದ ಆದೇಶದಲ್ಲಿ ಪ್ರತಿ ಎಕರೆಗೆ ರೂ. 1,70,000/–ಗಳನ್ನು ನಿಗದಿಪಡಿಸಿ ಆದೇಶಿಸಿದೆ.

ಸಿವಿಲ್ ನ್ಯಾಯಾಲಯದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆ ಕಾನೂನು ಕೋಶವು ಪತ್ರ ಸಂಖ್ಯೆ : ಆರ್‌ಡಿ 70 ಎಲ್‌ಸಿಜಿ 2012, ದಿನಾಂಕ : 5–7–2012 ರಲ್ಲಿ ಅಭಿಪ್ರಾಯ ನೀಡಿದೆ.

ಪಾವತಿಸಬೇಕಾದ ಪರಿಹಾರ ಮೊತ್ತದ ವಿವರ ಕೆಳಕಂಡಂತಿದೆ :

| ಕ್ರ. ಸಂ. | ಎಲ್‌ಎಸಿ | ಕಾಮನೂರು ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 18/11 | 82/B | 0–09 | 71241 |
| 2 | 19/11 | 83/A | 0–13 | 102681 |
| 3 | 20/11 | 82/A | 0–07 | 55519 |
| 4 | 21/11 | 13/2/1/P1 | 0–34 | 267742 |
| 5 | 22/11 | 63/AP1 | 0–11 | 86959 |
| **ಒಟ್ಟು** | | | | **584142** |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 123 ಭೂಸ್ವಾಪ್ರ 2012, ಬೆಂಗಳೂರು, ದಿನಾಂಕ : 25ನೇ ಸೆಪ್ಟೆಂಬರ್ 2012.**

ಕೊಪ್ಪಳ ಜಿಲ್ಲೆ ಮತ್ತು ತಾಲ್ಲೂಕಿನ ಕಾಮನೂರು ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಕಾಮನೂರು ಗ್ರಾಮದ ಜಮೀನುಗಳಿಗೆ ಕೊಪ್ಪಳ (ಹಿರಿಯ ಶ್ರೇಣಿ) ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ. 5,84,142/–ಗಳನ್ನು (ಐದು ಲಕ್ಷದ ಎಂಬತ್ತಾನ್ಲುಕು ಸಾವಿರದ ಒಂದು ನೂರ ನಲವತ್ತೆರಡು ರೂ.ಗಳು ಮಾತ್ರ) ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

2. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2012-13ನ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702-00-800-1-00-ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು- ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ. 5,84,142/- ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ : 20-10-2010 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

**P.R. 2107** ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾಂ ಜಿಲ್ಲೆ, ರಾಮದುರ್ಗ ತಾಲ್ಲೂಕು ಜಾಲಿಕಟ್ಟೆ ಗ್ರಾಮದ ಹದ್ದಿಯಲ್ಲಿ ಬಸಿ ನೀರಿನ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ : ಮುಇಂ/ ಸನೀ(ಉ)ವ/ ಬಿಜಾ/ಭೂಸ್ವಾಪ್ರ/2012-13/4176, ದಿನಾಂಕ :23-7-2012.

**ಪ್ರಸ್ತಾವನೆ :**

ಬೆಳಗಾಂ ಜಿಲ್ಲೆ, ರಾಮದುರ್ಗ ತಾಲ್ಲೂಕು ಜಾಲಿಕಟ್ಟೆ ಗ್ರಾಮದ ಹದ್ದಿಯಲ್ಲಿ ಬಸಿ ನೀರಿನ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಾಲಿಕಟ್ಟೆ ಗ್ರಾಮದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಮೇಲೆ ಓದಲಾದ ದಿನಾಂಕ : 23-7-2012ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಕೋರಿದ್ದಾರೆ. ಭೂಸ್ವಾಧೀನ ಪ್ರಕ್ರಿಯೆಯ ವಿವರಗಳು ಕೆಳಕಂಡಂತಿದೆ.

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1) ರ ಅಧಿಸೂಚನೆಯನ್ನು ದಿನಾಂಕ : 7-6-07 ರಂದು ಹೊರಡಿಸಿದೆ.
- ಭೂಸ್ವಾಧೀನಾಧಿಕಾರಿಗಳು ಐತೀರ್ಪು ರಚಿಸಿದ ದಿನಾಂಕ : 29-11-08.

ಭೂಸ್ವಾಧೀನಾಧಿಕಾರಿಗಳು ರಚಿಸಿದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ರಾಮದುರ್ಗ ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ) ದಲ್ಲಿ ಎಲ್.ಎ.ಸಿ. ಸಂಖ್ಯೆ : 46/09 ರಿಂದ 53/09ನ್ನು ದಾಖಲಿಸಿದ್ದು, ಸಿವಿಲ್ ನ್ಯಾಯಾಲಯ ದಿನಾಂಕ : 13-8-2010 ರಂದು ನೀಡಿರುವ ಆದೇಶದಲ್ಲಿ ಪ್ರತಿ ಎಕರೆಗೆ ರೂ. 1,21,000/-ಗಳ ಬೆಲೆಯನ್ನು ನಿಗದಿಪಡಿಸಿ, ಈ ಮೊತ್ತದ ಮೇಲೆ ಶಾಸನಬದ್ಧ ಇತರೆ ಸವಲತ್ತುಗಳೊಂದಿಗೆ ಪಾವತಿಸಲು ಆದೇಶಿಸಿದೆ. ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ : ಆರ್‌ಡಿ 1337 ಎಲ್‌ಸಿಬಿ 2010, ದಿನಾಂಕ : 31-8-12ರಂದು ಅಭಿಪ್ರಾಯ ನೀಡಿದೆ. ಪಾವತಿಸಬೇಕಾದ ಪರಿಹಾರ ಮೊತ್ತದ ವಿವರ ಕೆಳಕಂಡಂತಿದೆ:

| ಕ್ರ. ಸಂ. | ಎಲ್‌ಎಸಿ ಸಂಖ್ಯೆ | ಸ. ನಂ. | ವಿಸ್ತೀರ್ಣ ಎ-ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 46/09 | 41/2 | 0-13 | 85148 |
| 2 | 47/09 | 41/4 | 0-10 | 65614 |
| 3 | 48/09 | 41/1, 41/5 | 0-07 | 46080 |
| 4 | 49/09 | 42 | 0-05 | 33057 |
| 5 | 50/09 | 11/ಎಚ್2/ಎ | 5-05 | 1335334 |

| ಕ್ರ. ಸಂ. | ಎಲ್‌ಎಸಿ ಸಂಖ್ಯೆ | ಸ. ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 6. | 51/09 | 11/ಎಚ್/1 | 0–12 | 78636 |
| 7. | 52/09 | 13/1 | 0–13 | 85148 |
| 8. | 53/09 | 41/3 | 0–09 | 59102 |
| ಒಟ್ಟು | | | | **1788119** |

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 113 ಭೂಸ್ವಾಪ್ರ 2012, ಬೆಂಗಳೂರು, ದಿನಾಂಕ : 26ನೇ ಸೆಪ್ಟೆಂಬರ್ 2012.**

ಬೆಳಗಾಂ ಜಿಲ್ಲೆ, ರಾಮದುರ್ಗ ತಾಲ್ಲೂಕು ಜಾಲಿಕಟ್ಟೆ ಗ್ರಾಮದ ಹದ್ದಿಯಲ್ಲಿ ಬಸಿ ನೀರಿನ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಾಲಿಕಟ್ಟೆ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ರೂ. 17,88,119–00ಗಳನ್ನು (ಹದಿನೇಳು ಲಕ್ಷದ ಎಂಬತ್ತೆಂಟು ಸಾವಿರದ ಒಂದುನೂರ ಹತ್ತೊಂಬತ್ತು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2012–13ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಒದಗಿಸಿರುವ ಅನುದಾನದಿಂದ ರೂ. 17,88,119/– ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ : 20–10–2010 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

**P.R. 2108**

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಕೊಪ್ಪಳ ಜಿಲ್ಲೆ ಕುಷ್ಟಗಿ ತಾಲ್ಲೂಕಿನ ಪುರ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ :6–8–2012ರ ಪತ್ರ ಸಂಖ್ಯೆ : ಮುಇಂ/ಸನೀ(ಉ)ವ/ ಬಿಜೆಪಿ/ಭೂಸ್ವಾಪ್ರ/2012–13/4474.

**ಪ್ರಸ್ತಾವನೆ :**

ಕೊಪ್ಪಳ ಜಿಲ್ಲೆ ಕುಷ್ಟಗಿ ತಾಲ್ಲೂಕಿನ ಪುರ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಪುರ ಮತ್ತು ಕನ್ನಾಳ ಗ್ರಾಮಗಳ ಜಮೀನುಗಳಿಗೆ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಕುಷ್ಟಗಿ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ದಾಖಲಿಸಿದ್ದ ಎಲ್.ಎ.ಸಿ. ಪ್ರಕರಣಗಳಲ್ಲಿ ಮಾನ್ಯ ನ್ಯಾಯಾಲಯವು ನೀಡಿದ ತೀರ್ಪಿನಂತೆ ಹೆಚ್ಚಿನ ಪರಿಹಾರ ಧನ ಪಾವತಿಸಲು ರೂ. 39,56,025–00ಗಳನ್ನು ಬಿಡುಗಡೆ ಮಾಡುವಂತೆ ಕೋರಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಪ್ರಸ್ತಾವನೆ ಸಲ್ಲಿಸಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಕೆಳಕಂಡಂತಿವೆ.

- ಭೂಸ್ವಾಧೀನ ಕಾಯ್ದೆ ಕಲಂ 4(1) ರ ಅಧಿಸೂಚನೆ ದಿನಾಂಕ : 11–5–06
- ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ರಚಿಸಿದ ದಿನಾಂಕ : 10–8–09.

ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಂತೆ ಪರಿಹಾರ ಧನ ಪಡೆದ ಭೂಮಾಲೀಕರು ಹೆಚ್ಚಿನ ಪರಿಹಾರ ಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಕುಷ್ಟಗಿ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಎಲ್.ಎ.ಸಿ. ಪ್ರಕರಣಗಳನ್ನು ದಾಖಲಿಸಿ ನ್ಯಾಯಾಲಯದಿಂದ ಹೆಚ್ಚಿನ ಪರಿಹಾರ ಧನಕ್ಕೆ ಆದೇಶ ಪಡೆದುಕೊಂಡಿದೆ. ನ್ಯಾಯಾಲಯದ ತೀರ್ಪಿನಲ್ಲಿ ಭೂಸ್ವಾಧೀನಾಧಿಕಾರಿಗಳು ಪ್ರತಿ ಎಕರೆಗೆ ನಿಗದಿಪಡಿಸಿದ್ದ ರೂ. 16,000/–ಗಳಿಂದ ಪ್ರತಿ ಎಕರೆಗೆ ರೂ. 70,000/–ಗಳಂತೆ ಹೆಚ್ಚಿಸಿ ಶಾಸನಬದ್ಧ ಇತರೆ ಸವಲತ್ತುಗಳನ್ನು ನೀಡಲು ಆದೇಶಿಸಲಾಗಿದೆ.

ಸಿವಿಲ್ ನ್ಯಾಯಾಲಯದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ : ಆರ್‌ಡಿ 284 ಎಲ್‌ಸಿಜಿ 2012, ದಿನಾಂಕ : 23–5–2012 ರಲ್ಲಿ ಅಭಿಪ್ರಾಯ ನೀಡಿದೆ.

ಪಾವತಿಸಬೇಕಾದ ಬಾಕಿ ಪರಿಹಾರ ಮೊತ್ತದ ವಿವರ ಕೆಳಕಂಡಂತಿದೆ :

| ಕ್ರ. ಸಂ. | ಎಲ್‌ಎಸಿ ಸಂಖ್ಯೆ | ಪುರ ಮತ್ತ ಕನ್ನಾಳ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 501/11 | 93 | 4–38 | 848844 |
| 2 | 502/11 | 39/2ಎ | 2–05 | 359372 |
| 3 | 503/11 | 15/ಎ2 | 1–01 | 173602 |
| 4 | 504/11 | 15/ಬಿ | 2–00 | 338262 |
| 5 | 507/11 | 15/ಸಿ | 2–26 | 448034 |
| 6. | 508/11 | 15/ಎ | 1–01 | 173602 |
| 7. | 509/11 | 15/ಇ | 6–18 | 1089780 |
| 8. | 510/11 | 15/ಸಿ | 1–13 | 224266 |
| 9. | 511/11 | 39/3ಎ | 1–31 | 300263 |
| **ಒಟ್ಟು** | | | | **3956025** |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 120 ಭೂಸ್ವಾಪ್ರ 2012, ಬೆಂಗಳೂರು, ದಿನಾಂಕ : 25ನೇ ಸೆಪ್ಟೆಂಬರ್ 2012.**

ಕೊಪ್ಪಳ ಜಿಲ್ಲೆ ಕುಷ್ಟಗಿ ತಾಲ್ಲೂಕಿನ ಪುರ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಪುರ ಮತ್ತು ಕನ್ನಾಳ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಕುಷ್ಟಗಿ (ಹಿರಿಯ ಶ್ರೇಣಿ) ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ. 39,56,025/–ಗಳನ್ನು (ಮೂವತ್ತೊಂಬತ್ತು ಲಕ್ಷದ ಐವತ್ತಾರು ಸಾವಿರದ ಇಪ್ಪತ್ತೈದು ರೂ.ಗಳು ಮಾತ್ರ) ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2012–13ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ. 39,56,025/– ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ : 20–10–2010 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

**P.R. 2109**

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾವಿ ಜಿಲ್ಲೆ, ಸವದತ್ತಿ ತಾಲ್ಲೂಕು ಸತ್ತಿಗೇರಿ ಮತ್ತು ಕೊಡ್ಲಿವಾಡ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ಆದೇಶದಂತೆ ಪಾವತಿಸಬೇಕಾದ ಹೆಚ್ಚಿನ ಪರಿಹಾರಧನದ ಬಾಕಿ ಮೊತ್ತ ಪಾವತಿಸುವ ಕುರಿತು.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಸನೀಇ 160 ಭೂಸ್ವಾಪ್ರ 2011, ದಿನಾಂಕ : 30–3–2012.
2. ಶ್ರೀ ಬಿ.ಸಿ. ಬೆಲ್ಲದ್, ವಕೀಲರು, ಬೆಳಗಾಂ ಇವರ ಪತ್ರ ದಿನಾಂಕ : 20–4–2012.

**ಪ್ರಸ್ತಾವನೆ :**

ಬೆಳಗಾವಿ ಜಿಲ್ಲೆ, ಸವದತ್ತಿ ತಾಲ್ಲೂಕಿನ ಸತ್ತಿಗೇರಿ ಮತ್ತು ಕೊಡ್ಲಿವಾಡ ಗ್ರಾಮದ ಸಣ್ಣ ನೀರಾವರಿ ಕೆರೆಗಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ ಸಂಖ್ಯೆ 48, 50. 87 ಮತ್ತು 88/07ರಲ್ಲಿ ನೀಡಿದ ತೀರ್ಪಿನಂತೆ ರೂ. 31,93,014/–ಗಳ ಪರಿಹಾರಧನ ಬಿಡುಗಡೆ ಮಾಡಲು ಕೋರಿ ಮುಖ್ಯ ಅಭಿಯಂತರರು, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪ್ರಸ್ತಾವನೆಯನ್ನು ಪರಿಶೀಲಿಸಿ ಮೇಲೆ (1)ರಲ್ಲಿ ಓದಲಾದ ದಿನಾಂಕ : 30–3–2012 ರ ಸರ್ಕಾರದ ಆದೇಶದಲ್ಲಿ ರೂ. 22,60,531/–ಗಳನ್ನು ಬಿಡುಗಡೆ ಮಾಡಲಾಗಿತ್ತು. ಪ್ರಕರಣದ ಭೂಮಾಲೀಕರ ಪರ ವಕೀಲರು ಮೇಲೆ (2) ರಲ್ಲಿ ಓದಲಾದ ದಿನಾಂಕ : 20–4–12ರ ಪತ್ರದಲ್ಲಿ ಬಾಕಿ ಮೊತ್ತವನ್ನು ಬಿಡುಗಡೆ ಮಾಡುವಂತೆ ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ. ಈ ಮನವಿಯ ಬಗ್ಗೆ ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲು ಸರ್ಕಾರವು ನಿರ್ಧರಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 82 ಭೂಸ್ವಾಪ್ರ 2012, ಬೆಂಗಳೂರು, ದಿನಾಂಕ : 25ನೇ ಸೆಪ್ಟೆಂಬರ್ 2012.**

ಬೆಳಗಾಂ ಜಿಲ್ಲೆ ಸವದತ್ತಿ ತಾಲ್ಲೂಕಿನ ಸತ್ತಿಗೇರಿ ಮತ್ತು ಕೊಡ್ಲಿವಾಡ ಗ್ರಾಮದ ಸಣ್ಣ ನೀರಾವರಿ ಕೆರೆಗಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ಆದೇಶದಂತೆ ಪಾವತಿಸಬೇಕಾದ ಹೆಚ್ಚಿನ ಪರಿಹಾರ ಬಾಕಿ ಮೊತ್ತ ರೂ. 9,32,483/– (ಒಂಬತ್ತು ಲಕ್ಷದ ಮೂವತ್ತೆರಡು ಸಾವಿರದ ನಾನೂರ ಎಂಬತ್ಮೂರು ರೂ.ಗಳು ಮಾತ್ರ) ಗಳನ್ನು ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿಯ ಷರತ್ತುಗಳೊಂದಿಗೆ ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ.

ಈ ವೆಚ್ಚವನ್ನು 2012–13ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ. 9,32,483/– ಗಳನ್ನು ಹಂಚಿಕೆ ಮಾಡಿ, ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ : 20–10–10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

**P.R. 2110**

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಮಂಡ್ಯ ಜಿಲ್ಲೆ, ಮದ್ದೂರು ತಾಲ್ಲೂಕು, ಅಂಕನಾಥಪುರ ಏತ ನೀರಾವರಿ ಯೋಜನೆ, ಕದಲೂರು ಏತ ನೀರಾವರಿ ಯೋಜನೆ ಹಾಗೂ ಕಾಡುಕೊತ್ತನಹಳ್ಳಿ ಏತ ನೀರಾವರಿ ಯೋಜನೆಗಳ ಅಭಿವೃದ್ಧಿ ಕಾಮಗಾರಿಗಳ ಟೆಂಡರ್ ಅನುಮೋದನೆ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ : ಮುಸದ/ ತಾಂ.ಸ.7/ಸ.ಇಂ. 15/ ಮಂಡ್ಯ ಜಿಲ್ಲೆ ಮದ್ದೂರು ತಾ./ ಟೆಂಡರ್/ 2012–13/2970, ದಿನಾಂಕ : 24–8–2012.

**ಪ್ರಸ್ತಾವನೆ :**

ಮಂಡ್ಯ ಜಿಲ್ಲೆ, ಮದ್ದೂರು ತಾಲ್ಲೂಕು, ಅಂಕನಾಥಪುರ ಏತ ನೀರಾವರಿ ಯೋಜನೆ, ಕದಲೂರು ಏತ ನೀರಾವರಿ ಯೋಜನೆ ಹಾಗೂ ಕಾಡುಕೊತ್ತನಹಳ್ಳಿ ಏತ ನೀರಾವರಿ ಯೋಜನೆಯ ಅಭಿವೃದ್ಧಿ ಕಾಮಗಾರಿಗಳ ಅಂದಾಜು ಪಟ್ಟಿಗಳಿಗೆ ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ, ಮೈಸೂರು ಇವರು ಕೆಳಕಂಡಂತೆ ಮಂಜೂರಾತಿ ನೀಡಿರುತ್ತಾರೆ.

| | ಅಂದಾಜು ಮೊತ್ತ | ಸಿ.ಆರ್. ಸಂಖ್ಯೆ |
|---|---|---|
| ಅಂಕನಾಥಪುರ ಏತ ನೀರಾವರಿ ಯೋಜನೆ ಅಭಿವೃದ್ಧಿ | ರೂ. 45.00 ಲಕ್ಷ | 148/11-12 |
| ಕದಲೂರು ಏತ ನೀರಾವರಿ ಯೋಜನೆ ಅಭಿವೃದ್ಧಿ | ರೂ. 40.00 ಲಕ್ಷ | 145/11-12 |
| ಕಾಡುಕೊತ್ತನಹಳ್ಳಿ ಏತ ನೀರಾವರಿ ಯೋಜನೆ ಅಭಿವೃದ್ಧಿ | ರೂ. 30.00 ಲಕ್ಷ | 160/11-12 |

ಈ ಕಾಮಗಾರಿಯನ್ನು ಕೈಗೊಳ್ಳಲು ಮೈಸೂರು ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್ ಪ್ರಕಟಣೆಯನ್ನು ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | ಮೂಲ ಪ್ರಕಟಣೆ | ಮುಂದೂಡಿಕೆ ಪ್ರಕಟಣೆ |
|---|---|---|
| ರಾಜ್ಯ ಟೆಂಡರ್ ಬುಲೆಟಿನ್ | 15-3-2012 | 21-5-2012 |
| ಮಂಡ್ಯ ಜಿಲ್ಲಾ ಟೆಂಡರ್ ಬುಲೆಟಿನ್ | 19-3-2012 | 14-5-2012 |
| ಕನ್ನಡ ಪ್ರಭ ದಿನಪತ್ರಿಕೆ | 16-3-2012 | 21-5-2012 |
| ಉದಯವಾಣಿ ದಿನಪತ್ರಿಕೆ | 17-3-2012 | 20-5-2012 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ನಾಲ್ಕು ಜನ ಗುತ್ತಿಗೆದಾರರು ಬಿಡ್ ಅನ್ನು ಇ-ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನಲ್ಲಿ ಅಪ್‌ಲೋಡ್ ಮಾಡಿರುತ್ತಾರೆ. ಅವರಲ್ಲಿ ಇಬ್ಬರು ಗುತ್ತಿಗೆದಾರರ ಬಿಡ್ ಇ-ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಅಂತರ್ಜಾಲದಲ್ಲಿ ತಿರಸ್ಕೃತಗೊಂಡಿರುತ್ತದೆ. ಉಳಿದ ಇಬ್ಬರು ಗುತ್ತಿಗೆದಾರರ ತಾಂತ್ರಿಕ ಬಿಡ್ ಅನ್ನು ದಿನಾಂಕ : 12-6-2012 ರಂದು ಇ-ಪ್ರೊಕ್ಯೂರ್‌ಮೆಂಟ್ ಮೂಲಕ ತೆರೆದು ಪರಿಶೀಲಿಸಲಾಗಿರುತ್ತದೆ. ಇವರಲ್ಲಿ ಒಬ್ಬರ ಬಿಡ್ ಮಾತ್ರ ಅರ್ಹತೆ ಹೊಂದಿದ್ದು, ಇವರ ಆರ್ಥಿಕ ಬಿಡ್ ಅನ್ನು ದಿನಾಂಕ : 21-7-2012 ರಂದು ತೆರೆಯಲಾಗಿದ್ದು ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 107,44,467/- |
|---|---|---|---|---|
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 159,99,653/- |
| **ಕ್ರ. ಸಂಖ್ಯೆ** | **ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್** | **ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ** | **ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ** | **ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ** |
| 1. | ಕೆ.ಬಿ. ಕುಮಾರ್. 1ನೇ ದರ್ಜೆ ಗುತ್ತಿಗೆದಾರರು | 209,47,857/- | 94.96 ಹೆಚ್ಚು | 30.93 ಹೆಚ್ಚು |

ಮೇಲ್ಕಂಡಂತೆ ಶ್ರೀ ಕೆ.ಬಿ. ಕುಮಾರ್, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 30.93 ರಷ್ಟು ಹೆಚ್ಚಾಗಿರುತ್ತದೆ. ಸದರಿ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪರಿಷ್ಕೃತ ದರಗಳ ಮೇಲೆ ಶೇ. 14.50 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 183,19,603/- ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 70 ಏನೀಯೋ 2012 (ತಾಂತ್ರಿಕ), ಬೆಂಗಳೂರು, ದಿನಾಂಕ : 27ನೇ ಸೆಪ್ಟೆಂಬರ್ 2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮಂಡ್ಯ ಜಿಲ್ಲೆ ಮದ್ದೂರು, ತಾಲ್ಲೂಕು, ಅಂಕನಾಥಪುರ ಏತ ನೀರಾವರಿ ಯೋಜನೆ, ಕದಲೂರು ಏತ ನೀರಾವರಿ ಯೋಜನೆ ಹಾಗೂ ಕಾಡುಕೊತ್ತನಹಳ್ಳಿ ಏತ ನೀರಾವರಿ ಯೋಜನೆಗಳ ಅಭಿವೃದ್ಧಿ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 159,99,653/-ಗಳ ಮೇಲೆ ಶೇ. 14.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 183,19,603/-ಗಳಿಗೆ (ರೂ. ಒಂದು ಕೋಟಿ ಎಂಬತ್ತ ಮೂರು ಲಕ್ಷ ಹತ್ತೊಂಬತ್ತು ಸಾವಿರದ ಆರು ನೂರ ಮೂರು ರೂಪಾಯಿಗಳು ಮಾತ್ರ) ಶ್ರೀ ಕೆ.ಬಿ. ಕುಮಾರ್, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20–1–2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

P.R. 2123

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಗುಲ್ಬರ್ಗಾ ಜಿಲ್ಲೆ ಆಳಂದ ತಾಲ್ಲೂಕಿನ (1) ಛಲಗಾರ ಗ್ರಾಮದ ಶ್ರೀಮತಿ ಕಾಶೀಬಾಯಿ ಗಂಡ ಕಾಶೀನಾಥ ಸರ್ವೆ ಸಂ. 37(2) ಕೆರೂರ ಗ್ರಾಮದ ಶ್ರೀಮತಿ ಸುಶೀಲಾ ಬಾಯಿ ಗಂಡ ಹಣಮಂತ ಸರ್ವೆ ನಂ. 89 ಹಾಗೂ ಇತರರ ಜಮೀನುಗಳಿಗೆ ಕೊಳವೆ ಬಾವಿ ಮೂಲಕ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿಯ ಟೆಂಡರ್ ಅನುಮೋದಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ ಸನೀ(ಉ)ವ/ಬಿಜೆಪಿ/ ಪಿಬಿ–5/2012–13/4780 ದಿನಾಂಕ : 24–8–2012.

**ಪ್ರಸ್ತಾವನೆ :**

2011–12ನೇ ಸಾಲಿನ ವಿಶೇಷ ಘಟಕ ಯೋಜನೆಯಡಿ ಮಂಜೂರಾಗಿರುವ (1) ಛಲಗಾರ ಗ್ರಾಮದ ಶ್ರೀಮತಿ ಕಾಶೀಬಾಯಿ ಗಂಡ ಕಾಶೀನಾಥ ಸರ್ವೆ ಸಂ. 37(2) ಕೆರೂರ ಗ್ರಾಮದ ಶ್ರೀಮತಿ ಸುಶೀಲಾ ಬಾಯಿ ಗಂಡ ಹಣಮಂತ ಸರ್ವೆ ನಂ. 89 ಹಾಗೂ ಇತರರ ಜಮೀನುಗಳಿಗೆ ಕೊಳವೆ ಬಾವಿ ಮೂಲಕ ನೀರಾವರಿ ಸೌಲಭ್ಯ ಒದಗಿಸುವ ಎರಡು ಕಾಮಗಾರಿಗಳ ಒಟ್ಟು ರೂ. 13.00 ಲಕ್ಷಗಳ ಮೊತ್ತದ ಅಂದಾಜು ಪಟ್ಟಿಗಳಿಗೆ ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಗುಲ್ಬರ್ಗಾ ಇವರ ನೋಂದಣಿ ಸಂಖ್ಯೆ ಕ್ರಮವಾಗಿ 132/2011–12 ಮತ್ತು 131/2011–12 ರಲ್ಲಿ ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಪ್ಯಾಕೇಜ್ ಆಧಾರದ ಮೇಲೆ ಗುಲ್ಬರ್ಗಾ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್ ಪ್ರಕಟಣೆಯನ್ನು ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 23–6–2012 |
| ಸಂಯುಕ್ತ ಕರ್ನಾಟಕ ದಿನ ಪತ್ರಿಕೆ | 24–6–2012 |

ಇ–ಪ್ರೊಕ್ಯೂರ್‌ಮೆಂಟ್ ಮೂಲಕ ದಿನಾಂಕ : 11–7–2012ರಂದು ಟೆಂಡರನ್ನು ತೆರೆದು ಪರಿಶೀಲಿಸಲಾಗಿದ್ದು ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಮಾತ್ರ ಭಾಗವಹಿಸಿದ್ದು ಇವರು ಅರ್ಹತೆ ಹೊಂದಿರುತ್ತಾರೆ. ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | ರೂ. 12,34,570/– |
|---|---|---|
| ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| ಸೋಮನಗೌಡ ಬಿ. ಕರೇಕಲ್, ಗುತ್ತಿಗೆದಾರರು | 15,93,720/– | 29.09 ಹೆಚ್ಚು |

ಮೇಲ್ಕಂಡಂತೆ ಶ್ರೀ ಸೋಮನಗೌಡ ಬಿ. ಕರೇಕಲ್, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 29.09 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 12,34,570/–ಗಳ ಮೇಲೆ ಶೇಕಡಾ 14.00 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 24,07,410/–ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 72 ಏನೀಯೋ 2012 (ತಾಂತ್ರಿಕ), ಬೆಂಗಳೂರು, ದಿನಾಂಕ : 1ನೇ ಅಕ್ಟೋಬರ್ 2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ ಜಿಲ್ಲೆ ಆಳಂದ ತಾಲ್ಲೂಕಿನ (1) ಛಲಗಾರ ಗ್ರಾಮದ ಶ್ರೀಮತಿ ಕಾಶೀಬಾಯಿ ಗಂಡ ಕಾಶೀನಾಥ ಸರ್ವೆ ಸಂ. 37(2) ಕೆರೂರ ಗ್ರಾಮದ ಶ್ರೀಮತಿ ಸುಶೀಲಾ ಬಾಯಿ ಗಂಡ ಹಣಮಂತ ಸರ್ವೆ ನಂ. 89 ಹಾಗೂ ಇತರರ ಜಮೀನುಗಳಿಗೆ ಕೊಳವೆ ಬಾವಿ ಮೂಲಕ ನೀರಾವರಿ ಸೌಲಭ್ಯ ಒದಗಿಸುವ ಪ್ಯಾಕೇಜ್ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 12,34,570/–ಗಳ ಮೇಲೆ ಶೇ. 14.00 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 14,07,410/–ಗಳಿಗೆ (ರೂ. ಹದಿನಾಲ್ಕು ಲಕ್ಷ ಏಳು ಸಾವಿರದ ನಾನ್ನೂರ ಹತ್ತು ಮಾತ್ರ)ಗಳಿಗೆ ಶ್ರೀ ಸೋಮನಗೌಡ ಬಿ. ಕರೇಕಲ್, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

3. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
4. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20–1–2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

P.R. 2124

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ದಕ್ಷಿಣ ಕನ್ನಡ ಜಿಲ್ಲೆ, ಸುಳ್ಯ ತಾಲ್ಲೂಕು, ಅಲಟ್ಟಿ ಗ್ರಾಮದ ಕಲ್ಕಿ ಎಂಬಲ್ಲಿ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದನೆ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ : ಮುಸದ/ತಾಂಸ–5–ಸ.ಇಂ–11/ದ.ಕ.ಜಿ/ಸು.ತಾ/ಕಲ್ಕಿ/ಇಪ್ರೊಕ್ಯೂರ್‌ಮೆಂಟ್/ ಟೆಂಡರ್ ಅನುಮೋದನೆ/ 2011/ 2955, ದಿನಾಂಕ : 23–8–2012.

**ಪ್ರಸ್ತಾವನೆ :**

ದಕ್ಷಿಣ ಕನ್ನಡ ಜಿಲ್ಲೆ, ಸುಳ್ಯ ತಾಲ್ಲೂಕು, ಅಲಟ್ಟಿ ಗ್ರಾಮದ ಕಲ್ಕಿ ಎಂಬಲ್ಲಿ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯ ರೂ. 45.00 ಲಕ್ಷಗಳ ಅಂದಾಜು ಪಟ್ಟಿಗೆ ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ, ಮೈಸೂರು ಇವರು ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಮಂಗಳೂರು ಸಣ್ಣ ನೀರಾವರಿ ವಿಭಾಗದಿಂದ ಕರೆಯಲಾದ ಮೊದಲ ಮೂರು ಟೆಂಡರ್ ಕರೆಗಳಿಗೆ ಯಾವುದೇ ಪ್ರತಿಕ್ರಿಯೆ ದೊರಕಿರುವುದಿಲ್ಲ. ನಂತರ 4ನೇ ಬಾರಿಗೆ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ದಕ್ಷಿಣ ಕನ್ನಡ ಜಿಲ್ಲಾ ಟೆಂಡರ್ ಬುಲೆಟಿನ್ | 30–4–2012 |
| ಉದಯವಾಣಿ ಮತ್ತು ಕರಾವಳಿ ಅಲೆ | 8–5–2012 |

ದಿನಾಂಕ : 5–6–2012 ರಂದು ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಟೆಂಡರ್ ಅನ್ನು ತೆರೆಯಲಾಗಿದ್ದು, ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಇವರ ಟೆಂಡರ್ ಅರ್ಹತೆ ಹೊಂದಿದ್ದು, ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 44,09,369/– |

| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಹಾಗೂ ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|---|
| 1. | ನಾಗರಾಜ ಎಂ. ನಾಯ್ಕ, 1ನೇ ದರ್ಜೆ ಗುತ್ತಿಗೆದಾರರು | 52,93,467/– | 20.05 ಹೆಚ್ಚು |

ಮೇಲ್ಕಂಡಂತೆ ಶ್ರೀ ನಾಗರಾಜ ಎಂ. ನಾಯ್ಕ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾರ ಶೇಕಡ 20.05 ರಷ್ಟು ಹೆಚ್ಚಾಗಿರುತ್ತದೆ. ಸದರಿ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪರಿಷ್ಕೃತ ದರಗಳ ಮೇಲೆ ಶೇ. 14.00 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 50,25,681/– ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 102 ಅಪಿಬಂ 2012 (ತಾಂತ್ರಿಕ), ಬೆಂಗಳೂರು, ದಿನಾಂಕ : 1ನೇ ಅಕ್ಟೋಬರ್ 2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಕ್ಷಿಣ ಕನ್ನಡ ಜಿಲ್ಲೆ, ಸುಳ್ಯ ತಾಲ್ಲೂಕು, ಅಲಟ್ಟಿ ಗ್ರಾಮದ ಕಲ್ಕಿ ಎಂಬಲ್ಲಿ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಮೊತ್ತ ರೂ. 44,09,369/– ಗಳ ಮೇಲೆ ಶೇ. 14.00 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 50,26,681/–ಗಳಿಗೆ (ರೂ. ಐವತ್ತು ಲಕ್ಷ ಇಪ್ಪತ್ತ ಆರು ಸಾವಿರದ ಆರು ನೂರ ಎಂಬತ್ತ ಒಂದು ರೂಪಾಯಿಗಳು ಮಾತ್ರ)ಗಳಿಗೆ ಶ್ರೀ ನಾಗರಾಜ ಎಂ. ನಾಯ್ಕ, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20–1–2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

**P.R. 2125**

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ದಕ್ಷಿಣ ಕನ್ನಡ ಜಿಲ್ಲೆ, ಬೆಳ್ತಂಗಡಿ ತಾಲ್ಲೂಕು, ನೆರಿಯಾ ಗ್ರಾಮದ ಅಣೆಯೂರು ಹೊಳೆಗೆ ಪರ್ಪಳ ಎಂಬಲ್ಲಿ ಕಿಂಡಿ ಅಣೆಕಟ್ಟು (ಬ್ರಿಡ್ಜ್ ಕಂ ಬ್ಯಾರೇಜ್) ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದನೆ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ: ಮುಸದ/ ತಾಂಸ–5–ಸ.ಇಂ–11/ ದ.ಕ.ಜಿ/ ಬೆ.ತಾ/ಪರ್ಪಳ/ ಇಪ್ರೊಕ್ಯೂರ್‌ಮೆಂಟ್/ ಟೆಂಡರ್ ಅನುಮೋದನೆ/ 2011/ 2956, ದಿನಾಂಕ : 23–8–2012.

**ಪ್ರಸ್ತಾವನೆ :**

ದಕ್ಷಿಣ ಕನ್ನಡ ಜಿಲ್ಲೆ, ಬೆಳ್ತಂಗಡಿ ತಾಲ್ಲೂಕು, ನೆರಿಯಾ ಗ್ರಾಮದ ಅಣೆಯೂರು ಹೊಳೆಗೆ ಪರ್ಪಳ ಎಂಬಲ್ಲಿ ಕಿಂಡಿ ಅಣೆಕಟ್ಟು (ಬ್ರಿಡ್ಜ್ ಕಂ ಬ್ಯಾರೇಜ್) ನಿರ್ಮಾಣ ಕಾಮಗಾರಿಯ ರೂ. 90.00 ಲಕ್ಷಗಳ ಅಂದಾಜು ಪಟ್ಟಿಗೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಮಂಗಳೂರು ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | **ಮೂಲ ಪ್ರಕಟಣೆ** | **ಮುಂದೂಡಿಕೆ ಪ್ರಕಟಣೆ** |
|---|---|---|
| ದಕ್ಷಿಣ ಕನ್ನಡ ಜಿಲ್ಲಾ ಟೆಂಡರ್ ಬುಲೆಟಿನ್ | 6–2–2012 | 16–4–2012 |
| ವಿಜಯ ಕರ್ನಾಟಕ ಮತ್ತು ಉದಯವಾಣಿ ದಿನ ಪತ್ರಿಕೆ | | 27–4–2012 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಬಿಡ್ ಅನ್ನು ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನಲ್ಲಿ ಅಪ್‌ಲೋಡ್ ಮಾಡಿರುತ್ತಾರೆ. ಇವರ ತಾಂತ್ರಿಕ ಬಿಡ್ ಅನ್ನು ದಿನಾಂಕ : 7–5–2012 ರಂದು ಇ–ಪ್ರೊಕ್ಯೂರ್‌ಮೆಂಟ್ ಮೂಲಕ ತೆರೆದು ಪರಿಶೀಲಿಸಲಾಗಿರುತ್ತದೆ. ಇವರಲ್ಲಿ ಒಬ್ಬರು ಮಾತ್ರ ಅರ್ಹತೆ ಹೊಂದಿದ್ದು, ಇವರ ಆರ್ಥಿಕ ಬಿಡ್ ಅನ್ನು ದಿನಾಂಕ : 30–6–2012 ರಂದು ತೆರೆಯಲಾಗಿದ್ದು ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳಿಗೆ ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 87,99,629/– |
|---|---|---|---|
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಹಾಗೂ ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1. | ಮಹಮ್ಮದ್ ರಫಿ. ಕೆ.ಎಂ. 1ನೇ ದರ್ಜೆ ಗುತ್ತಿಗೆದಾರರು | 95,68,409/– | 8.7365 ಹೆಚ್ಚು |

ಮೇಲ್ಕಂಡಂತೆ ಶ್ರೀ ಮಹಮ್ಮದ್ ರಫಿ.ಕೆ.ಎಂ. 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತಕ್ಕೆ ಹೋಲಿಸಿದಾಗ ಶೇಕಡ 8.7365 ರಷ್ಟು ಹೆಚ್ಚಾಗಿರುತ್ತದೆ. ಸದರಿ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪರಿಷ್ಕೃತ ದರಗಳ ಮೇಲೆ ಶೇ. 8.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 95,47,597/– ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 101 ಅಪಿಬಂ 2012 (ತಾಂತ್ರಿಕ), ಬೆಂಗಳೂರು, ದಿನಾಂಕ : 1ನೇ ಅಕ್ಟೋಬರ್ 2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಕ್ಷಿಣ ಕನ್ನಡ ಜಿಲ್ಲೆ, ಬೆಳ್ತಂಗಡಿ ತಾಲ್ಲೂಕು, ನೆರಿಯಾ ಗ್ರಾಮದ ಅಣೆಯೂರು ಹೊಳೆಗೆ ಪರ್ಪಳ ಎಂಬಲ್ಲಿ ಕಿಂಡಿ ಅಣೆಕಟ್ಟು (ಬ್ರಿಡ್ಜ್ ಕಂ ಬ್ಯಾರೇಜ್) ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಮೊತ್ತ ರೂ. 87,99,629/–ಗಳ ಮೇಲೆ ಶೇ. 8.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 95,47,597/–ಗಳಿಗೆ (ರೂ. ತೊಂಬತ್ತ ಐದು ಲಕ್ಷ ನಲವತ್ತ ಏಳು ಸಾವಿರದ ಐದು ನೂರ ತೊಂಬತ್ತ ಏಳು ರೂಪಾಯಿಗಳು ಮಾತ್ರ)ಗಳಿಗೆ ಶ್ರೀ ಮಹಮ್ಮದ್ ರಫಿ. ಕೆ.ಎಂ, 1ನೇ ದರ್ಜೆ ಗುತ್ತಿಗೆದಾರರು ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20–1–2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ರುದ್ರಮೂರ್ತಿ**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

**P.R. 2126**

## ಇಂಧನ ಸಚಿವಾಲಯ

**ವಿಷಯ:** ಮೆ॥ ಭರೂಕ ಪವರ್ ಕಾರ್ಪೊರೇಷನ್ ರವರಿಗೆ ಹಂಚಿಕೆಯಾಗಿರುವ 0.5 ಮೆ.ವ್ಯಾ. ಸಾಮರ್ಥ್ಯದ ರಾಜಾನ್‌ಕೊಲ್ಲೂರ್ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ : ಡಿಇ 53 ಎನ್‌ಸಿಇ 2001, ದಿನಾಂಕ 08–10–2001.
2. ಸರ್ಕಾರಿ ಆದೇಶ ಸಂಖ್ಯೆ : ಇಂಇ 394 ಎನ್‌ಸಿಇ 2004, ದಿನಾಂಕ 3–12–2004.
3. ಸರ್ಕಾರಿ ಆದೇಶ ಸಂಖ್ಯೆ : ಡಿಇ 219 ಎನ್‌ಸಿಇ 2005, ದಿನಾಂಕ 03–08–2005.
4. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : KRED/06/SH–65/ರಾಜಾನ್‌ಕೊಲ್ಲೂರ್, ಕಿಜವಿಯೊ/2012–13/1998, ದಿನಾಂಕ 13.07.2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಸರ್ಕಾರಿ ಆದೇಶದಲ್ಲಿ ಮೆ॥ ಭರೂಕ ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪನಿಗೆ ಗುಲ್ಬರ್ಗಾ ಜಿಲ್ಲೆಯ ಶೋರಾಪುರ ತಾಲ್ಲೂಕಿನ ರಾಜನ್ ಕೊಲ್ಲೂರು ಇಲ್ಲಿ 0.5 ಮೆ.ವ್ಯಾ. ಸಾಮರ್ಥ್ಯದ ರಾಜನ್ ಕೊಲ್ಲೂರು ಕಿರು ಜಲ ವಿದ್ಯುತ್ ಯೋಜನೆಯನ್ನು

ಕೆಲವೊಂದು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿತ್ತು. ಸದರಿ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು ಮೇಲೆ ಓದಲಾದ ಕ್ರಮಸಂಖ್ಯೆ (2) ರ ಸರ್ಕಾರಿ ಆದೇಶದಲ್ಲಿ ದಿನಾಂಕ 31–12–2007 ರವರೆಗೆ ವಿಸ್ತರಿಸಿ ಆದೇಶಿಸಲಾಗಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಸರ್ಕಾರಿ ಆದೇಶದಲ್ಲಿ ಮೆ॥ ಭರೂಕ ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪನಿಯವರಿಗೆ ಹಂಚಿಕೆ ಮಾಡಲಾಗಿರುವ 0.5 ಮೆ.ವ್ಯಾ. ಸಾಮರ್ಥ್ಯದ ರಾಜನ್ ಕೊಲ್ಲೂರು ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ॥ ಜಮೂನಾ ಇನ್ಫ್ರಾಸ್ಟ್ರಕ್ಚರ್ ಪ್ರಾಜೆಕ್ಟ್ ಲಿಮಿಟೆಡ್ ಕಂಪನಿಯ ಹೆಸರಿನಲ್ಲಿ ವರ್ಗಾವಣೆ ಮಾಡಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಸದರಿ ಕಂಪನಿಯ ಹೆಸರನ್ನು ಮೆ॥ ಭರೂಕ ಎನರ್ಜಿ ಲಿಮಿಟೆಡ್ ಎಂದು ದಿನಾಂಕ 7–8–2007 ರಂದು Registrar of Companies ರವರ certificate ನಂತೆ ಬದಲಾಯಿಸಲಾಗಿದ್ದು, ಯೋಜನೆಯನ್ನು ಕಾರ್ಯಗತಗೊಳಿಸಲು ಆರ್ಥಿಕವಾಗಿ ಸಾಧ್ಯವಾಗದ ಕಾರಣ ರದ್ದುಪಡಿಸುವಂತೆ ಅಭಿವೃದ್ಧಿದಾರರು ಕೋರಿರುವುದರಿಂದ, ಮೇಲ್ಕಂಡ 0.5 ಮೆ.ವ್ಯಾ. ಸಾಮರ್ಥ್ಯವನ್ನು ರದ್ದುಗೊಳಿಸಲು ಶಿಫಾರಸ್ಸಿಸಿ ಮೇಲೆ ಓದಲಾದ ಕ್ರಮಸಂಖ್ಯೆ (4)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 229 ಎನ್‌ಸಿಇ 2012, ಬೆಂಗಳೂರು, ದಿನಾಂಕ : 26ನೇ ಸೆಪ್ಟೆಂಬರ್ 2012**

ಮೆ॥ ಭರೂಕ ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪನಿಗೆ ಗುಲ್ಬರ್ಗಾ ಜಿಲ್ಲೆಯ ಶೋರಾಪುರ ತಾಲ್ಲೂಕಿನ ರಾಜನ್ ಕೊಲ್ಲೂರು ಎಂಬಲ್ಲಿ ಹಂಚಿಕೆ ಮಾಡಿರುವ 0.5 ಮೆ.ವ್ಯಾ. ಸಾಮರ್ಥ್ಯದ ರಾಜನ್ ಕೊಲ್ಲೂರು ಕಿರು ಜಲ ವಿದ್ಯುತ್ ಯೋಜನೆಗೆ ಸಂಬಂಧಿಸಿದ ಆದೇಶ ಮತ್ತು ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೌಸಲ್ಯಾ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

P.R. 2127

## ಇಂಧನ ಸಚಿವಾಲಯ

**ವಿಷಯ:** ಮೆ॥ ಭರೂಕ ಪವರ್ ಕಾರ್ಪೊರೇಷನ್ ಲಿಮಿಟೆಡ್ ರವರಿಗೆ ಹಂಚಿಕೆಯಾಗಿರುವ 4 ಮೆ.ವ್ಯಾ. ಸಾಮರ್ಥ್ಯದ ನೆರಿಯ–II (ಕಲಂಜ) ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ : ಡಿಇ 221 ಎನ್‌ಸಿಇ 2005, ದಿನಾಂಕ 23–08–2005.

2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : KRED/06/SH–209/ನೆರಿಯ–ಕಲಂಜ, ಕಿಜವಿಯೊ/2012–13/1989, ದಿನಾಂಕ 11/13.07.2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಸರ್ಕಾರಿ ಆದೇಶದಲ್ಲಿ ಮೆ॥ ಭರೂಕ ಪವರ್ ಕಾರ್ಪೊರೇಷನ್ ಲಿಮಿಟೆಡ್ ರವರಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಕಲಂಜ ಗ್ರಾಮದ ನೆರಿಯಾ ನದಿಗೆ ಅಡ್ಡಲಾಗಿ 4.00 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (Latitude : $12^0$56''-N Longitude : $75^0$25'-E) ಕೆಲವೊಂದು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರು ಮೆ॥ ಭರೂಕ ಪವರ್ ಕಾರ್ಪೊರೇಷನ್ ಲಿಮಿಟೆಡ್ ರವರಿಗೆ ದಿನಾಂಕ 23–8–2010 ರ ಆದೇಶದಲ್ಲಿ ಹಂಚಿಕೆಯಾಗಿರುವ ಮೇಲ್ಕಂಡ 4 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನಾ ಪ್ರದೇಶವು ಅರಣ್ಯ ಮತ್ತು ಪಶ್ಚಿಮ ಘಟ್ಟ ಪ್ರದೇಶದಲ್ಲಿ ಬರುವುದರಿಂದ ಅಭಿವೃದ್ಧಿದಾರರು ಸರ್ಕಾರಕ್ಕೆ ಅಧ್ಯರ್ಪಿಸಲು ಸಿದ್ದರಿರುವುದಾಗಿ ತಿಳಿಸಿರುವುದರಿಂದ, ಸದರಿ ಸಾಮರ್ಥ್ಯವನ್ನು ರದ್ದುಗೊಳಿಸಲು ಶಿಫಾರಸ್ಸಿಸಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 219 ಎನ್‌ಸಿಇ 2012, ಬೆಂಗಳೂರು, ದಿನಾಂಕ : 24ನೇ ಸೆಪ್ಟೆಂಬರ್ 2012**

ಮೆ॥ ಭರೂಕ ಪವರ್ ಕಾರ್ಪೊರೇಷನ್ ಲಿಮಿಟೆಡ್ ರವರಿಗೆ ಸರ್ಕಾರಿ ಆದೇಶ ಸಂಖ್ಯೆ ಡಿಇ 221 ಎನ್‌ಸಿಇ 2005 ದಿನಾಂಕ 23–8–2005 ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಕಲಂಜ ಗ್ರಾಮದ ನೆರಿಯಾ ನದಿಗೆ ಅಡ್ಡಲಾಗಿ ಹಂಚಿಕೆ ಮಾಡಿರುವ 4 ಮೆ.ವ್ಯಾ. ಸಾಮರ್ಥ್ಯದ ಕಿರು

ಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಹಾಗೂ ಈ ಸಂಬಂಧ ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೌಸಲ್ಯಾ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**P.R. 2128**

## ಇಂಧನ ಸಚಿವಾಲಯ

**ವಿಷಯ:** ಮೆ॥ ಪ್ರಭಾಕರ್ ಪವರ್ ಪ್ರಾಜೆಕ್ಟ್ ಲಿಮಿಟೆಡ್ ರವರ 5 ಮೆ.ವ್ಯಾ. ಸಾಮರ್ಥ್ಯದ ನಾರಾಯಣಪುರ ಕಿರು ಜಲ ವಿದ್ಯುತ್ ಯೋಜನೆಗೆ ಕಾಲಾವಕಾಶ ವಿಸ್ತರಣೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ : ಡಿಇ 125 ಎನ್‌ಸಿಇ 1996 (14) ದಿನಾಂಕ 10-06-1997.
2. ಸರ್ಕಾರಿ ಆದೇಶ ಸಂಖ್ಯೆ : ಇಎನ್ 369 ಎನ್‌ಸಿಇ 2004, ದಿನಾಂಕ 08-12-2004.
3. ಸರ್ಕಾರಿ ಆದೇಶ ಸಂಖ್ಯೆ : ಇಎನ್ 363 ಎನ್‌ಸಿಇ 2004, ದಿನಾಂಕ 05-1-2005.
4. ಸರ್ಕಾರದ ಆದೇಶ ಸಂಖ್ಯೆ : ಇಎನ್ 363 ಎನ್‌ಸಿಇ 2004, ದಿನಾಂಕ 08-6-2005.
5. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ : ಕೆಆರ್‌ಇಡಿ/06/SH-233/2011/2685, ದಿನಾಂಕ 02/12-09-2011 ಮತ್ತು ಕೆಆರ್‌ಇಡಿ/06/SH-233/2012-13/2333, ದಿನಾಂಕ 07/08-08-2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ದಿನಾಂಕ 10-06-1997ರ ಆದೇಶದಲ್ಲಿ ಮೆ॥ ಎ. ಪ್ರಭಾಕರ ರೆಡ್ಡಿ ಮತ್ತು ಕಂಪನಿ, ಹೈದರಾಬಾದ್ ಇವರಿಗೆ ರಾಯಚೂರು ಜಿಲ್ಲೆಯ ನಾರಾಯಣಪುರ ಡ್ಯಾಂ ರೊಡಾಲ್ ಬಂಡಾ ಬಳಿ 5.00 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಕೆಲವೊಂದು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿತ್ತು. ಸದರಿ ಯೋಜನೆಯನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ರದ್ದುಗೊಳಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಆದೇಶದಲ್ಲಿ ಮೆ॥ ಸ್ವಾರ್ತ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ರಾಯಚೂರು ಜಿಲ್ಲೆಯ ನಾರಾಯಣಪುರ ಅಣೆಕಟ್ಟಿನಲ್ಲಿ ರೊಡಾಲ್ ಬಂಡಾ ಬಳಿ 5.00 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಕೆಲವೊಂದು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿತ್ತು. ಮೆ॥ ಸ್ವಾರ್ತ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ರವರಿಗೆ ಹಂಚಿಕೆ ಮಾಡಿದ್ದು ಮೇಲ್ಕಾಣಿಸಿದ ಯೋಜನೆಯನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ಆದೇಶದಲ್ಲಿ ರದ್ದುಗೊಳಿಸಿ, ಮೆ॥ ಎ. ಪ್ರಭಾಕರ ರೆಡ್ಡಿ ಮತ್ತು ಕಂಪನಿ, ಹೈದರಾಬಾದ್ ರವರ ರದ್ದುಗೊಳಿಸಿದ್ದ ಆದೇಶವನ್ನು ಹಿಂಪಡೆದು ದಿನಾಂಕ 10-6-1997ರ ಆದೇಶವನ್ನು ಉಳಿಸಿಕೊಳ್ಳಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (5) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ॥ ಪ್ರಭಾಕರ್ ಪವರ್ ಪ್ರಾಜೆಕ್ಟ್ ಲಿಮಿಟೆಡ್ ಇವರಿಗೆ ರಾಯಚೂರು ಜಿಲ್ಲೆಯ ನಾರಾಯಣಪುರ ಡ್ಯಾಂ ರೊಡಾಲ್ ಬಂಡಾ ಬಳಿ 5.00 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ಕಾಲಾವಕಾಶವನ್ನು ದಿನಾಂಕ 06-05-2011 ರಿಂದ 05-05-2013 ರವರೆಗೆ ವಿಸ್ತರಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಮಾನ್ಯ ರಾಜ್ಯ ಉಚ್ಚ ನ್ಯಾಯಾಲಯವು ರಿಟ್ ಅಪೀಲು ಸಂಖ್ಯೆ 828/2008ಕ್ಕೆ ಸಂಬಂಧಿಸಿದಂತೆ ದಿನಾಂಕ 05-03-2009 ರಂದು ನೀಡಿರುವ ತೀರ್ಪಿನಂತೆ ಅಭಿವೃದ್ಧಿದಾರರು ಕೆ.ಆರ್.ಇ.ಡಿ.ಎಲ್., ಕೆ.ಪಿ.ಟಿ.ಸಿ.ಎಲ್. ಮತ್ತು ಕೆ.ಬಿ.ಜೆ.ಎನ್.ಎಲ್. ರವರು ಯೋಜನೆ ಅನುಷ್ಠಾನಕ್ಕೆ ಅನುಮತಿ ನೀಡಿದ ಎರಡು ವರ್ಷಗಳಲ್ಲಿ ಯೋಜನೆಯನ್ನು ಪೂರ್ಣಗೊಳಿಸಬೇಕು ಇಲ್ಲದಿದ್ದಲ್ಲಿ ಈ ಮಂಜೂರಾತಿಯನ್ನು ಹಿಂಪಡೆಯುವಂತೆ ಆದೇಶಿಸಿದೆ. ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತ (ಕೆ.ಬಿ.ಜೆ.ಎನ್.ಎಲ್.) ರವರು ಸದರಿ ಯೋಜನೆಗೆ ಅನುಮೋದನೆಯನ್ನು ದಿನಾಂಕ 21-04-2012 ರಂದು ನೀಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 370 ಎನ್‌ಸಿಇ 2011, ಬೆಂಗಳೂರು, ದಿನಾಂಕ : 24ನೇ ಸೆಪ್ಟೆಂಬರ್ 2012**

ಮೆ॥ ಪ್ರಭಾಕರ್ ಪವರ್ ಪ್ರಾಜೆಕ್ಟ್ ಲಿಮಿಟೆಡ್ ಇವರಿಗೆ ರಾಯಚೂರು ಜಿಲ್ಲೆಯ ನಾರಾಯಣಪುರ ಡ್ಯಾಂ ರೊಡಾಲ್ ಬಂಡಾ ಬಳಿ ಮಂಜೂರು ಮಾಡಿರುವ 5.00 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ಕಾಲಾವಕಾಶವನ್ನು ದಿನಾಂಕ 06-05-2011 ರಿಂದ 05-05-2013 ರವರೆಗೆ ವಿಸ್ತರಿಸಿ ಆದೇಶಿಸಿದೆ.

ಸದರಿ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೌಸಲ್ಯಾ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

P.R. 2129

## ಇಂಧನ ಸಚಿವಾಲಯ

**ವಿಷಯ:** ಮೆ॥ ಗಿರಿರಾಜ್ ಎಂಟರ್‌ಪ್ರೈಸಸ್ ರವರಿಗೆ ಮಂಜೂರಾಗಿರುವ 10.5 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ಕಾಲಾವಕಾಶ ವಿಸ್ತರಿಸುವ ಕುರಿತು.

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂಖ್ಯೆ : ಇಎನ್ 230 ಎನ್‌ಸಿಇ 2004, ದಿನಾಂಕ 13–9–2004.
2. ಸರ್ಕಾರಿ ಆದೇಶ ಸಂಖ್ಯೆ : ಇಎನ್ 483 ಎನ್‌ಸಿಇ 2010, ದಿನಾಂಕ 28–12–2010.
3. ಸರ್ಕಾರಿ ಆದೇಶ ಸಂಖ್ಯೆ : ಇಎನ್ 27 ಎನ್‌ಸಿಇ 2012, ದಿನಾಂಕ 01–03–2012.
4. ಸರ್ಕಾರಿ ಆದೇಶ ಸಂಖ್ಯೆ : ಇಎನ್ 188 ಎನ್‌ಸಿಇ 2012, ದಿನಾಂಕ 13–07–2012.
5. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : KRED/08/SEL-GE–10.5/MW/HMM/2012/2455, ದಿನಾಂಕ : 4/06–09–2012.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ಮೆ॥ ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಗೆ ಬಳ್ಳಾರಿ ಮತ್ತು ಬೆಳಗಾವಿ ಜಿಲ್ಲೆಗಳಲ್ಲಿ 91.00 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಲವೊಂದು ನಿಬಂಧನೆಗಳಿಗೊಳಪಟ್ಟು ಹಂಚಿಕೆ ಮಾಡಲಾಗಿತ್ತು.

ಮೇಲಿನ ಆದೇಶದಲ್ಲಿ ಹಂಚಿಕೆಯಾಗಿದ್ದ ಒಟ್ಟು 91.00 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ ಬೆಳಗಾವಿ ಜಿಲ್ಲೆಯ ಸವದತ್ತಿ ತಾಲ್ಲೂಕಿನಲ್ಲಿ ಹಂಚಿಕೆಯಾಗಿರುವ ಅಂಶಿಕ ಸಾಮರ್ಥ್ಯವಾದ 6.00 ಮೆಗಾ ವ್ಯಾಟ್ ಸಾಮರ್ಥ್ಯವನ್ನು 10.5 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಸರ್ಕಾರಿ ಆದೇಶದಲ್ಲಿ ಹೆಚ್ಚಿಸಿ ಯೋಜನೆಯನ್ನು ಅನುಷ್ಠಾನಗೊಳಿಸಲು ದಿನಾಂಕ 25–06–2011 ರವರೆಗೆ ಕಾಲಾವಕಾಶವನ್ನು ವಿಸ್ತರಿಸಲಾಗಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಸರ್ಕಾರಿ ಆದೇಶದಲ್ಲಿ ಈ ಯೋಜನೆಯು ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ದಿನಾಂಕ 1–3–2012 ರಿಂದ ಮುಂದಿನ 6 ತಿಂಗಳವರೆಗೆ ವಿಸ್ತರಿಸಿ ಆದೇಶಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಸರ್ಕಾರಿ ಆದೇಶದಲ್ಲಿ ಮೆ॥ ಸ್ಜುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಯವರಿಗೆ ಬೆಳಗಾವಿ ಜಿಲ್ಲೆಯ ಸವದತ್ತಿ ತಾಲ್ಲೂಕಿನ ಯಡ್ರಾವಿ ಮತ್ತು ಬೆಟ್ಟಸೂರ ಗ್ರಾಮಗಳಲ್ಲಿ ಅನುಮತಿಸಿರುವ 10.5 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ॥ ಗಿರಿರಾಜ್ ಎಂಟರ್‌ಪ್ರೈಸಸ್ ರವರಿಗೆ ಯೋಜನೆಯನ್ನು 31–08–2012 ರೊಳಗೆ ಅನುಷ್ಠಾನಗೊಳಿಸತಕ್ಕದ್ದೆಂಬ ಷರತ್ತಿನೊಂದಿಗೆ ವರ್ಗಾಯಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು, ಕೆಪಿಟಿಸಿಎಲ್‌ನ ಸವದತ್ತಿಯಲ್ಲಿಯ ಉಪ ವಿದ್ಯುತ್ ಸ್ಥಾವರವು (Sub station) ಕಾರ್ಯಾರಂಭ ಆಗದಿರುವ್ಯದರಿಂದ ಮೆ॥ ಗಿರಿರಾಜ್ ಎಂಟರ್‌ಪ್ರೈಸಸ್ ರವರಿಗೆ ಮಂಜೂರಾಗಿರುವ 10.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ನಿಗದಿತ ಅವಧಿಯೊಳಗಾಗಿ ಅನುಷ್ಠಾನಗೊಳಿಸಲು ಸಾಧ್ಯವಾಗದ್ದರಿಂದ, ಯೋಜನೆ ಅನುಷ್ಠಾನಕ್ಕೆ ದಿನಾಂಕ 30–11–2012ರವರೆಗೆ ಕಾಲಾವಕಾಶವನ್ನು ವಿಸ್ತರಿಸಲು ಅಭಿವೃದ್ಧಿದಾರರ ಕೋರಿಕೆ ಮೇರೆಗೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 276 ಎನ್‌ಸಿಇ 2012, ಬೆಂಗಳೂರು, ದಿನಾಂಕ : 26ನೇ ಸೆಪ್ಟೆಂಬರ್ 2012**

ಮೆ॥ ಗಿರಿರಾಜ್ ಎಂಟರ್‌ಪ್ರೈಸಸ್ ರವರಿಗೆ ಬೆಳಗಾವಿ ಜಿಲ್ಲೆಯ ಸವದತ್ತಿ ತಾಲ್ಲೂಕಿನ ಯಡ್ರಾವಿ ಮತ್ತು ಬೆಟ್ಟಸೂರ ಗ್ರಾಮಗಳಲ್ಲಿ ಅನುಮತಿಸಿರುವ 10.5 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸಲು ಕಾಲಾವಕಾಶವನ್ನು ದಿನಾಂಕ 01–09–2012 ರಿಂದ 30–11–2012 ರವರೆಗೆ ನಿಗದಿತ ಕಾಲಾವಕಾಶ ಶುಲ್ಕವನ್ನು ಪಾವತಿಸತಕ್ಕದ್ದೆಂಬ ಷರತ್ತಿನೊಂದಿಗೆ ವಿಸ್ತರಿಸಿ ಆದೇಶಿಸಿದೆ.

ಸದರಿ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೌಸಲ್ಯಾ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

P.R. 2130

## ಇಂಧನ ಸಚಿವಾಲಯ

**ವಿಷಯ:** ಮೆ॥ ಏಟ್ರಿಯಾ ಪವರ್ ಕಾರ್ಪೋರೇಷನ್ ಲಿಮಿಟೆಡ್ ಕಂಪನಿಗೆ 120 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಘಟಕ ಸ್ಥಾಪಿಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:**

1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/08/ WT-2MW/2012/269, ದಿನಾಂಕ: 17/23.01.2012 ಮತ್ತು ಕೆಆರ್ಇಡಿ/ 08/SRR/WT-APCL-120 MW/Bijapur / 2012/1869, ದಿನಾಂಕ: 30/06/02.07.2012.
2. ದಿನಾಂಕ: 07–07–2012 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ದಿನಾಂಕ 17/23–1–2012ರ ಪತ್ರದಲ್ಲಿ ಮೆ॥ ವಂಡರ್ ಕೆಟ್ ಕಂಪನಿಯವರಿಗೆ ಬಿಜಾಪುರ ಜಿಲ್ಲೆಯ ಬಸವನಬಾಗೇವಾಡಿ ತಾಲ್ಲೂಕು ನಂದಿಹಾಳ ಮತ್ತು ಟಕ್ಕಳಕಿ ಗ್ರಾಮಗಳಲ್ಲಿ 2 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಘಟಕ ಸ್ಥಾಪಿಸಲು ಅನುಮತಿ ನೀಡುವಂತೆ ಕೋರಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ತದನಂತರ ದಿನಾಂಕ 30.6./02.07.2012ರ ಪತ್ರದಲ್ಲಿ ಮೆ॥ ವಂಡರ್ ಕೆಟ್ ಎಂಬ ಪ್ರೊಪ್ರೈಟರ್ ಸಂಸ್ಥೆಯನ್ನು ಮೆ॥ ವಂಡರ್ ಟೆಕ್ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯಾಗಿ ಮಾರ್ಪಡಿಸಿಕೊಂಡಿದೆ ಎಂದು ಈ ಕಂಪನಿಯು ಮೆ॥ ಏಟ್ರಿಯಾ ಪವರ್ ಕಾರ್ಪೋರೇಷನ್ ಲಿಮಿಟೆಡ್ ಕಂಪನಿಯ ಅಂಗ ಸಂಸ್ಥೆಯಾಗಿದ್ದು ಸದರಿ ಕಂಪನಿಯ ಹೆಸರಿನಲ್ಲಿ ಯೋಜನೆಯನ್ನು ಸ್ಥಾಪಿಸಲು ಡಿಪಿಆರ್‌ನ್ನು ಸಲ್ಲಿಸಿದ್ದು ಸದರಿ ಸ್ಥಳದಲ್ಲಿ 120 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸಬಹುದಾಗಿದೆ ಎಂದು ತಿಳಿಸಿರುತ್ತಾರೆಂದು ವರದಿ ಮಾಡುತ್ತಾ ಮೆ॥ ಏಟ್ರಿಯಾ ಪವರ್ ಕಾರ್ಪೋರೇಷನ್ ಲಿಮಿಟೆಡ್ ಇವರಿಗೆ ಬಿಜಾಪುರ ಜಿಲ್ಲೆಯ, ಬಸವನಬಾಗೇವಾಡಿ ತಾಲ್ಲೂಕಿನ, ವಿವಿಧ ಗ್ರಾಮಗಳಲ್ಲಿ 120 ಮೆ.ವ್ಯಾ. ಪವನ ವಿದ್ಯುತ್ ಘಟಕವನ್ನು ಸ್ಥಾಪಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ ಹಾಗೂ ಈ ಘಟಕದಿಂದ ಉತ್ಪಾದಿಸುವ ವಿದ್ಯುತ್ತನ್ನು ವಿದ್ಯುತ್ ಸರಬರಾಜು ಕಂಪನಿಗೆ ಸರಬರಾಜು ಮಾಡಲು ವಿದ್ಯುತ್ ಖರೀದಿ ಒಪ್ಪಂದ ಮಾಡಿಕೊಳ್ಳಲಿರುವುದಾಗಿ ತಿಳಿಸಿರುತ್ತಾರೆ.

ದಿನಾಂಕ 07–07–2012 ರಂದು ನಡೆದ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ॥ ಏಟ್ರಿಯಾ ಪವರ್ ಕಾರ್ಪೋರೇಷನ್ ಲಿಮಿಟೆಡ್ ಇವರಿಗೆ 120.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಘಟಕ ಸ್ಥಾಪಿಸಲು ಅನುಮತಿ ನೀಡಲು ಸಮಿತಿಯು ಶಿಫಾರಸ್ಸು ಮಾಡಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 79 ಎನ್‌ಸಿಇ 2012, ಬೆಂಗಳೂರು, ದಿನಾಂಕ : 27ನೇ ಸೆಪ್ಟೆಂಬರ್ 2012**

ಮೆ॥ ಏಟ್ರಿಯಾ ಪವರ್ ಕಾರ್ಪೋರೇಷನ್ ಲಿಮಿಟೆಡ್ ಇವರಿಗೆ ಬಿಜಾಪುರ ಜಿಲ್ಲೆಯ, ಬಸವನಬಾಗೇವಾಡಿ ತಾಲ್ಲೂಕಿನ, ವಿವಿಧ ಗ್ರಾಮಗಳಲ್ಲಿ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ನಿಬಂಧನೆಗೊಳಪಟ್ಟು 120 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಘಟಕ ಸ್ಥಾಪಿಸಲು ಅನುಮತಿಯನ್ನು ನೀಡಲಾಗಿದೆ.

| Toposheet No. | Proposed capacity in MW | Near by villages of the proposed area and district | Geographical area description of the project |
|---|---|---|---|
| 47 P/14 | 120 MW<br>(75 Nos x 1600 kW) | Nandihal, Basavanabagewadi, Masbinal, Hattarkihal and Takkalaki Villages in Basavanabagewadi Taluk, Bijapura District. | The proposed area is in plain land Basavanabagewadi and NH-13 is crossing the area towards Kustagi and also covered in Simi Halla and area is held in the following geographical co-ordinates :<br>Latitude : $16^{0}33'56''$ – $16^{0}40'0''$N<br>Longitude : $75^{0}53'44''$ – $75^{0}58'03''$E<br>Ridge peaks : 606, 622, 602, 623, 615 & 592m Amsl |
| **TOTAL** | **120 MW** | | |

1. ಈ ಯೋಜನೆಯನ್ನು ಆದೇಶ ಹೊರಡಿಸಿದ ದಿನಾಂಕದಿಂದ 3 ವರ್ಷದ ಅವಧಿಯೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿನಾಂಕ 06–1–2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು. ತಪ್ಪಿದ್ದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.

3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸ್ಟೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ಒಂದು ವರ್ಷದಲ್ಲಿ ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್‌ನಕ್ಷೆ ಮತ್ತು ವಿಂಡ್ ಫಾರ್ಮನ ಲೇಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.

4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| **ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ** | **5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ** | **ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ)** |
|---|---|---|
| ➢ 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| ➢ 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| ➢ 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| ➢ 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.

6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ಕಂದಾಯ ಇಲಾಖೆ, ಕರ್ನಾಟಕ ಪರಿಸರ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು. ಅಭಿವೃದ್ಧಿದಾರರು ಈ ಯೋಜನೆಯನ್ನು ಖಾಸಗಿ ಜಮೀನಿನಲ್ಲಿ ಕೈಗೊಳ್ಳುತ್ತಿರುವುದರಿಂದ, ಖಾಸಗಿ ಜಮೀನಿನ ಮಾಲೀಕರಿಂದ ಒಪ್ಪಿಗೆ ಪತ್ರವನ್ನು ಪಡೆಯತಕ್ಕದ್ದು.

7. ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ನೀತಿ ನಿಯಮಾನುಸಾರ ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

8. ಸರ್ಕಾರಿ ಆದೇಶ ಸಂ: ಇಎನ್ 95 ಇಬಿಎಸ್ 2009, ದಿನಾಂಕ 29–12–2009 ರನ್ವಯ ವಿನಾಯಿತಿ ಸೌಲಭ್ಯಗಳು ಅನ್ವಯಿಸುವುದು.

9. ಯೋಜನೆಯನ್ನು ತ್ವರಿತವಾಗಿ ಅನುಷ್ಠಾನ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವುದು.

10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆ ಮಾತ್ರ ಸೀಮಿತವಾಗಿದೆ ಹಾಗೂ ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.

11. ಸದರಿ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೌಸಲ್ಯಾ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

P.R. 2131

## ಇಂಧನ ಸಚಿವಾಲಯ

**ವಿಷಯ:** ಮೆ॥ ಗೋಕಾಕ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ರವರ 2.8 ಮೆಗಾ ವ್ಯಾಟ್ ಸಾಮರ್ಥ್ಯದ ದೂಪದಾಳ್ ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ॥ ಗೋಕಾಕ್ ಪವರ್ ಅಂಡ್ ಎನರ್ಜಿ ಲಿಮಿಟೆಡ್ ರವರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ : PWD 235 PTC 85 (2), ದಿನಾಂಕ 13–09–1989.

2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/06/SH-02B/ ದೂಪದಾಳ್ ಎಂಹೆಚ್‌ಎಸ್/2012/2348, ದಿನಾಂಕ 23/24.08.2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆ॥ ಗೋಕಾಕ್ ಮಿಲ್ಸ್ ಕಂಪನಿಗೆ ಬೆಳಗಾವಿ ಜಿಲ್ಲೆಯ ದೂಪದಾಳ್ ಬಳಿ 4.00 ಮೆ.ವ್ಯಾ. ಸಾಮರ್ಥ್ಯದ ಕ್ಯಾಪ್ಟಿವ್ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ॥ ಗೋಕಾಕ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ಕಂಪನಿಯವರು ಅನುಷ್ಠಾನಗೊಳಿಸಿರುವ 2.8 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಅಭಿವೃದ್ಧಿದಾರರ ಕೋರಿಕೆ ಮೇರೆಗೆ ಮೆ॥ ಗೋಕಾಕ್ ಪವರ್ ಅಂಡ್ ಎನರ್ಜಿ ಲಿಮಿಟೆಡ್ ರವರಿಗೆ ವರ್ಗಾಯಿಸುವ ಕುರಿತು ವರ್ಗಾವಣೆಗೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 263 ಎನ್‌ಸಿಇ 2012, ಬೆಂಗಳೂರು, ದಿನಾಂಕ : 14ನೇ ಸೆಪ್ಟೆಂಬರ್ 2012**

ಮೆ॥ ಗೋಕಾಕ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ಕಂಪನಿಯವರು ಬೆಳಗಾವಿ ಜಿಲ್ಲೆಯ ದೂಪದಾಳ್ ಬಳಿ ಅನುಷ್ಠಾನಗೊಳಿಸಿರುವ 2.8 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ॥ ಗೋಕಾಕ್ ಪವರ್ ಅಂಡ್ ಎನರ್ಜಿ ಲಿಮಿಟೆಡ್ ರವರಿಗೆ ಕೆಳಕಂಡ ಷರತ್ತಿಗೊಳಪಟ್ಟು ವರ್ಗಾಯಿಸಿ ಆದೇಶಿಸಲಾಗಿದೆ.

1. ಮೆ॥ ಗೋಕಾಕ್ ಪವರ್ ಅಂಡ್ ಎನರ್ಜಿ ಲಿಮಿಟೆಡ್ ಕಂಪನಿಯವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011, ದಿನಾಂಕ 06–1–2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.
2. ಸದರಿ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೌಸಲ್ಯಾ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

P.R. 2132

## ಇಂಧನ ಸಚಿವಾಲಯ

**ವಿಷಯ:** ಮೆ॥ ಗೋಕಾಕ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ರವರ 8.00 ಮೆಗಾ ವ್ಯಾಟ್ ಸಾಮರ್ಥ್ಯದ ಗೋಕಾಕ್ ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ॥ ಗೋಕಾಕ್ ಪವರ್ ಅಂಡ್ ಎನರ್ಜಿ ಲಿಮಿಟೆಡ್ ರವರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂಖ್ಯೆ : ಇಎನ್ 88 ಎನ್‌ಸಿಇ 2007, ದಿನಾಂಕ 07–8–2007.
2. ಸರ್ಕಾರಿ ಆದೇಶ ಸಂಖ್ಯೆ : ಇಎನ್ 507 ಎನ್‌ಸಿಇ 2010, ದಿನಾಂಕ 10–1–2012.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/06/SH-02/ ಗೋಕಾಕ್ ಎಂಹೆಚ್‌ಎಸ್/2012/2349, ದಿನಾಂಕ 23/24.08.2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆ॥ ಫೋರ್ಬ್ಸ್ ಗೋಕಾಕ್ ಲಿಮಿಟೆಡ್ ಕಂಪನಿಗೆ ಬೆಳಗಾವಿ ಜಿಲ್ಲೆಯ ಗೋಕಾಕ್ ಫಾಲ್ಸ್‌ನಲ್ಲಿ ಅನುಷ್ಠಾನ ಮಾಡಲು ಅನುಮತಿಸಲಾದ 3.5 ಮೆಗಾ ವ್ಯಾಟ್ ಸಾಮರ್ಥ್ಯದ ಗೋಕಾಕ್ ಫಾಲ್ಸ್ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 4.5 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಆದೇಶದಲ್ಲಿ ಮೆ॥ ಗೋಕಾಕ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ (ಗೋಕಾಕ್ ಮಿಲ್ಸ್ ವಿಭಾಗ) ಕಂಪನಿಗೆ ಬೆಳಗಾವಿ ಜಿಲ್ಲೆಯ ಗೋಕಾಕ್ ಫಾಲ್ಸ್‌ನಲ್ಲಿ ಅನುಷ್ಠಾನ ಮಾಡಲು ಅನುಮತಿಸಲಾದ 4.5 ಮೆಗಾ ವ್ಯಾಟ್ ಸಾಮರ್ಥ್ಯದ ಗೋಕಾಕ್ ಫಾಲ್ಸ್ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 4.5 ಮೆಗಾ ವ್ಯಾಟ್ ನಿಂದ 8.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ॥ ಗೋಕಾಕ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ಕಂಪನಿಯವರಿಗೆ ಮಂಜೂರಾಗಿರುವ 8.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯಲ್ಲಿ 3.5 ಮೆ.ವ್ಯಾ. ಸಾಮರ್ಥ್ಯವನ್ನು ಈಗಾಗಲೇ ಅನುಷ್ಠಾನಗೊಳಿಸಿದ್ದು, ಉಳಿದ 4.5 ಮೆ.ವ್ಯಾ. ಸಾಮರ್ಥ್ಯದ ಕಾಮಗಾರಿಗಳು ಪೂರ್ಣಗೊಂಡಿದ್ದು, ಅನುಷ್ಠಾನದ ಹಂತದಲ್ಲಿರುತ್ತದೆಯೆಂದು ವರದಿ ಮಾಡುತ್ತಾ, ಸದರಿ ಯೋಜನೆಯನ್ನು ಅಭಿವೃದ್ಧಿದಾರರ ಕೋರಿಕೆ ಮೇರೆಗೆ ಮೆ॥ ಗೋಕಾಕ್ ಪವರ್ ಅಂಡ್ ಎನರ್ಜಿ ಲಿಮಿಟೆಡ್ ರವರಿಗೆ ವರ್ಗಾಯಿಸುವ ಕುರಿತು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 264 ಎನ್‌ಸಿಇ 2012, ಬೆಂಗಳೂರು, ದಿನಾಂಕ : 14ನೇ ಸೆಪ್ಟೆಂಬರ್ 2012**

ಮೆ॥ ಗೋಕಾಕ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ (ಗೋಕಾಕ್ ಮಿಲ್ಸ್ ವಿಭಾಗ) ಕಂಪನಿಯವರಿಗೆ ಬೆಳಗಾವಿ ಜಿಲ್ಲೆಯ ಗೋಕಾಕ್ ಫಾಲ್ಸ್‌ನಲ್ಲಿ ಮಂಜೂರಾಗಿರುವ 8.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ॥ ಗೋಕಾಕ್ ಪವರ್ ಅಂಡ್ ಎನರ್ಜಿ ಲಿಮಿಟೆಡ್ ರವರಿಗೆ ವರ್ಗಾಯಿಸಿ ಆದೇಶಿಸಲಾಗಿದೆ.

1. ಮೆ॥ ಗೋಕಾಕ್ ಪವರ್ ಅಂಡ್ ಎನರ್ಜಿ ಲಿಮಿಟೆಡ್ ಕಂಪನಿಯವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011, ದಿನಾಂಕ 06–1–2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.
2. ಸದರಿ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೌಸಲ್ಯಾ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

P.R. 2133

## ಒಳಾಡಳಿತ ಸಚಿವಾಲಯ

### ಸೇರ್ಪಡೆ

**ಸಂ. ಹೆಚ್‌ಡಿ 30 ಸಿಆರ್‌ಆರ್ 2012, ಬೆಂಗಳೂರು, ದಿನಾಂಕ 05–10–2012**

**ವಿಷಯ:** ಕೋಮು ಗಲಭೆ, ನಾಗರೀಕ ಗಲಭೆ ಹಾಗೂ ಇತರೆ ಗಲಭೆಗಳಲ್ಲಿ ನೊಂದ ಸಂತ್ರಸ್ತರಿಗೆ, ತೊಂದರೆಗೊಳಗಾದ ವ್ಯಕ್ತಿಗಳಿಗೆ ಪರಿಹಾರ ಧನ ವಿತರಿಸುವ ಬಗ್ಗೆ.

"ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 30 ಸಿಆರ್‌ಆರ್ 2009, ದಿನಾಂಕ 09–07–2010ರ ಆದೇಶದ ಭಾಗದಲ್ಲಿ **"ಅನುಬಂಧದಲ್ಲಿ ನಮೂದಿಸಿರುವಂತೆ"** ಎಂಬ ಪದಗಳ ನಂತರ **"ತಕ್ಷಣದಿಂದ ಜಾರಿಗೆ ಬರುವಂತೆ"** ಎಂಬ ಪದಗಳನ್ನು ಸೇರಿಸಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಪ್ರಕಾಶ್ ವೈ.ಕೆ.,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ. (ಕಾನೂನು ಮತ್ತು ಸುವ್ಯವಸ್ಥೆ).

P.R. 2135

## HOME SECRETARIAT

### CIRCULAR

**No. HD 669 SST 2009, Bangalore, Dated 01-10-2012**

The Hon'ble Supreme Court of India while disposing off Writ Petition (Criminal) No. 23/2008 in Re: Incident relating to Criminal Intimidation to a Member of Central Administrative Tribunal V/s. Union of India & ors, has noted with concern the

allegations of criminal intimidation and humiliation against Members of Central Administrative Tribunal and directed the Union and the State Governments to ensure that proper security be provided to the Members of the Central Administrative Tribunal so that they may be saved from any untoward and unsavoury incidents in future, which is an obligation on the part of the State to provide a conducive atmosphere for dispensation of justice.

2. In the light of the above observation of the Hon'ble Supreme Court of India, it is impressed upon all the law enforcing authorities to ensure that minimum courtesy required and adequate security to all the Members of the Central Administrative Tribunal be provided.

3. These instructions should be followed scrupulously.

By Order and in the name of the Governor of Karnataka

**PRAKASH Y.K.,**

Under Secretary to Government,

**P.R. 2136** Home Department. (Law & Order).

## ಕಂದಾಯ ಸಚಿವಾಲಯ

**ವಿಷಯ:** "ನಿಮಾನ್ಸ್" ಸಂಸ್ಥೆಗೆ ಜಮೀನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 64 ಎಲ್‌ಜಿಬಿ 2000, ದಿನಾಂಕ 21–01–2000.
2. ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 220 ಎಲ್‌ಜಿಬಿ 2002, ದಿನಾಂಕ 09–10–2002.
3. ಪತ್ರ ಸಂಖ್ಯೆ : ಎಲ್.ಎನ್.ಡಿ. (ಪೂ) ಸಿ.ಆರ್.43/11–12, ದಿನಾಂಕ 10–04–2012.
4. ಪತ್ರ ಸಂಖ್ಯೆ : ಡಿ 28/2011, ದಿನಾಂಕ 18–04–2012.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್.ಪುರ ಹೋಬಳಿ, ಕ್ಯಾಲಸಹಳ್ಳಿ ಗ್ರಾಮದ ಸ.ನಂ. 11, 15 ಮತ್ತು 16 ರಲ್ಲಿ ಒಟ್ಟು 46.00 ಎಕರೆ ಜಮೀನನ್ನು ಕರ್ನಾಟಕ ಗೃಹ ಮಂಡಳಿ ಇವರಿಗೆ ಮಂಜೂರು ಮಾಡಲಾಗಿತ್ತು. ನಂತರ ಉಲ್ಲೇಖ (2)ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಗೃಹ ಮಂಡಳಿ ಮಂಜೂರು ಮಾಡಲಾದ ಆದೇಶ ರದ್ದುಪಡಿಸಿ ಸದರಿ ಜಮೀನನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಇವರಿಗೆ ಕಸ ವಿಲೇವಾರಿ ಹಾಗೂ ಚಿತಾಗಾರ ನಿರ್ಮಾಣ ಇವುಗಳಿಗೆ ಮಂಜೂರು ಮಾಡಲಾಗಿತ್ತು. ಆದರೆ ಇದುವರೆವಿಗೂ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಸದರಿ ಜಮೀನನ್ನು ಉಪಯೋಗಿಸಿಕೊಂಡಿರುವುದಿಲ್ಲ.

ಮೇಲೆ (4) ರಲ್ಲಿ ಓದಲಾದ ಪತ್ರ ಬರೆಯುತ್ತಾ, ನಿರ್ದೇಶಕರು/ಉಪಕುಲಪತಿಗಳು, ನಿಮಾನ್ಸ್ ಇವರು, ರೋಗಿಗಳ ಸಂಖ್ಯೆ ಹೆಚ್ಚಾಗಿರುವುದರಿಂದ ನಿಮಾನ್ಸ್ ನಾರ್ಥನ್ ಕ್ಯಾಂಪಸ್ ಸ್ಥಾಪಿಸಲು ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್.ಪುರ ಹೋಬಳಿ, ಕ್ಯಾಲಸಹಳ್ಳಿ ಗ್ರಾಮದಲ್ಲಿ 50 ರಿಂದ 100 ಎಕರೆ ಸರ್ಕಾರಿ ಜಮೀನನ್ನು ಮಂಜೂರು ಮಾಡಲು ಕೋರಿರುತ್ತಾರೆ.

ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿ, ಬೆಂಗಳೂರು ನಗರ ಇವರು 39.38 ಎಕರೆ/ಗುಂಟೆ ಜಮೀನನ್ನು ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್.ಪುರ ಹೋಬಳಿ, ಕ್ಯಾಲಸಹಳ್ಳಿ ಗ್ರಾಮದ ಸ.ನಂ. 11 ಮತ್ತು 16 ರಲ್ಲಿ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಈ ಹಿನ್ನೆಲೆಯಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಆರ್‌ಡಿ 338 ಎಲ್‌ಜಿಬಿ 2012, ಬೆಂಗಳೂರು, ದಿನಾಂಕ : 18ನೇ ಸೆಪ್ಟೆಂಬರ್ 2012**

ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್.ಪುರ ಹೋಬಳಿ, ಕ್ಯಾಲಸಹಳ್ಳಿ ಗ್ರಾಮದ ಸ.ನಂ. 11 ಮತ್ತು 16 ರಲ್ಲಿ ಒಟ್ಟು 39.38 ಎಕರೆ/ಗುಂಟೆ ಜಮೀನನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಮಂಜೂರು, ಮಾಡಲಾದ ಆದೇಶ ರದ್ದುಗೊಳಿಸಿ, ಸದರಿ ಜಮೀನನ್ನು ಕರ್ನಾಟಕ ಭೂ ಮಂಜೂರಾತಿ ನಿಯಮಗಳ (1969) ನಿಯಮ 21ರ ಮೇರೆಗೆ ವರ್ಷ ಒಂದಕ್ಕೆ ರೂ. 10.00 ಲಕ್ಷಗಳ ಮೊತ್ತ ವಿಧಿಸಿ 30 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ನಿಮ್ಹಾನ್ಸ್ (National Institute of Mental Health and Neuro Sciences, Bangalore) ಇವರಿಗೆ ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಉಮಾದೇವಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

**P.R. 2137** ಕಂದಾಯ ಇಲಾಖೆ. (ಭೂ ಮಂಜೂರಾತಿ–1).

## ಕಂದಾಯ ಸಚಿವಾಲಯ

**ವಿಷಯ:** ಹಾವೇರಿ ಜಿಲ್ಲೆ, ಶಿಗ್ಗಾಂವ ತಾಲ್ಲೂಕಿನಲ್ಲಿ ಕರ್ನಾಟಕ ಜಾನಪದ ವಿಶ್ವವಿದ್ಯಾಲಯ ಸ್ಥಾಪಿಸಲು ಭೂಮಿ ನೀಡುವ ಬಗ್ಗೆ.

**ಓದಲಾಗಿದೆ:**

1. ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ ಇವರ ಪತ್ರ ಸಂಖ್ಯೆ : ಪ್ರಾಆಬೆ/ಭೂಮಿ/4/ಎಲ್‌ಜಿಎ/ವಿವ/26/2011-12, ದಿನಾಂಕ 07-12-2011.
2. ಜಿಲ್ಲಾಧಿಕಾರಿ, ಹಾವೇರಿ ಇವರ ಪತ್ರ ಸಂಖ್ಯೆ : ಎಲ್‌ಜಿಎಲ್ ವಹಿ/39/2011-12, ದಿನಾಂಕ 07-06-2012.
3. ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 76 ಎಲ್‌ಜಿಡಿ 2011, ದಿನಾಂಕ 07-06-2012.
4. ಕುಲಸಚಿವರು, ಕರ್ನಾಟಕ ಜಾನಪದ ವಿಶ್ವವಿದ್ಯಾಲಯ, ವಿಜಯನಗರ, ಬೆಂಗಳೂರು ಇವರ ಪತ್ರ ಸಂಖ್ಯೆ : ಕಜಾವಿವಿ.ಕ್ರಮಾಂಕ 285/2012-13, ದಿನಾಂಕ 11-06-2012.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ದಿನಾಂಕ 07-12-2011ರ ಪತ್ರದಲ್ಲಿ ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ ಇವರು ಸಲ್ಲಿಸಿದ ಪ್ರಸ್ತಾವನೆ ಮೇರೆಗೆ ಮೇಲೆ (3) ರಲ್ಲಿ ಓದಲಾದ ಆದೇಶದಲ್ಲಿ ಹಾವೇರಿ ಜಿಲ್ಲೆ, ಶಿಗ್ಗಾಂವ ತಾಲ್ಲೂಕಿನ ವಿವಿಧ ಗ್ರಾಮಗಳಲ್ಲಿ ಒಟ್ಟು 122-19 ಎಕರೆ ವಿಸ್ತೀರ್ಣದ ಭೂಮಿಯನ್ನು ಕರ್ನಾಟಕ ಜಾನಪದ ವಿಶ್ವವಿದ್ಯಾಲಯಕ್ಕೆ ಮುಫತ್ತಾಗಿ ಹಸ್ತಾಂತರಿಸಲು ಮಂಜೂರಾತಿ ನೀಡಲಾಗಿತ್ತು.

ನಂತರ, ಕುಲಪತಿ, ಕರ್ನಾಟಕ ಜಾನಪದ ವಿಶ್ವವಿದ್ಯಾಲಯ ಇವರು ಮೇಲೆ (4) ರಲ್ಲಿ ಓದಲಾದ ಪತ್ರ ಬರೆಯುತ್ತಾ ಹಾವೇರಿ ಜಿಲ್ಲೆ, ಶಿಗ್ಗಾಂವ ತಾಲ್ಲೂಕಿನ ಗೊಟಗೋಡಿಯ ಸ.ನಂ. 116/ಎ ರಲ್ಲಿ ಇನ್ನೂ 38-00 ಎಕರೆ ಗಾಯರಾಣ ಭೂಮಿ ಇದ್ದು, ಆ ಸ್ಥಳದಲ್ಲಿ ನೂತನ ವಿಶ್ವವಿದ್ಯಾಲಯದ ವಿವಿಧ ಕಟ್ಟಡಗಳನ್ನು ನಿರ್ಮಿಸಬೇಕಾಗಿದೆ. ಆದಕಾರಣ ಗೊಟಗೋಡಿ ಗ್ರಾಮದಲ್ಲಿ ಬಾಕಿ ಇರುವ ಭೂಮಿಯನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ. ದಿನಾಂಕ 20-09-2011ರ ಪತ್ರದಲ್ಲಿ ಜಿಲ್ಲಾಧಿಕಾರಿ, ಹಾವೇರಿ ಇವರು ತಿಳಿಸಿರುವ ಪ್ರಕಾರ ಉಲ್ಲೇಖಿತ ಸರ್ವೆ ನಂ. ನಲ್ಲಿ ಇನ್ನೂ 38-00 ಎಕರೆ ಭೂಮಿ ಲಭ್ಯವಿರುತ್ತದೆ.

ಆ ಹಿನ್ನೆಲೆಯಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಆರ್‌ಡಿ 76 ಎಲ್‌ಜಿಡಿ 2011, ಬೆಂಗಳೂರು, ದಿನಾಂಕ : 20ನೇ ಸೆಪ್ಟೆಂಬರ್ 2012**

ಹಾವೇರಿ ಜಿಲ್ಲೆ, ಶಿಗ್ಗಾಂವ ತಾಲ್ಲೂಕಿನಲ್ಲಿ ಕರ್ನಾಟಕ ಜಾನಪದ ವಿಶ್ವವಿದ್ಯಾಲಯ ಸ್ಥಾಪಿಸಲು, ಗೊಟಗೋಡಿಯ ಸ.ನಂ. 116/ಎ ರಲ್ಲಿ ಬಾಕಿ ಉಳಿದಿರುವ 38-00 ಎಕರೆ ವಿಸ್ತೀರ್ಣದ ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮಗಳ 1966ರ ನಿಯಮ 97(4) ರಡಿ ಗಾಯರಾಣ ಶೀರ್ಷಿಕೆಯಿಂದ ತಗ್ಗಿಸಿ ಕರ್ನಾಟಕ ಭೂ ಕಂದಾಯ ಕಾಯ್ದೆ 1964 ಅಧಿನಿಯಮ 71ರ ಮೇರೆಗೆ ಜಾನಪದ ವಿಶ್ವವಿದ್ಯಾಲಯಕ್ಕೆ ಮುಫತ್ತಾಗಿ ಹಸ್ತಾಂತರಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಜಿ. ಲಕ್ಷ್ಮೀನಾರಾಯಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ. (ಭೂ ಮಂಜೂರಾತಿ-3).

P.R. 2139

## ENERGY SECRETARIAT

**Sub :** Sourcing and supply of Liquefied Natural Gas (LNG) to Karnataka Power Corporation Limited's (KPCL) Bidadi Combined Cycle Power Plant (BCCP).

**Read :** G.O. No. EN 78 PPC 2010, dated 05-07-2011.

**PREAMBLE :**

1) Approval for the following was accorded vide Government Order read above.

   a) To proceed with the implementation of the first block of Gas based 1 x 700 MW ± 20% Bidadi Combined Cycle Power Plant on Liquefied Natural Gas (LNG) fuel ;

   b) To Procure Liquefied Natural Gas (LNG) for the first block of 700MW ± 20% through 100% on spot market basis, on continuous as & when required through GAIL/IOCL or any other organization to be

chosen by the Committee headed by the Chief Secretary of Karnataka, duly exempting Karnataka Power Corporation Limited from the KTPP Act ;

c) To enter into a Gas Transportation Agreement (GTA) with GAIL for transportation of gas for 1st block of 700 MW ± 20% capacity, duly exempting Karnataka Power Corporation Limited from the KTPP Act ;

d) The decision on fixing of cap on the GAIL transmission charges shall be taken by the Committee held under the Chairmanship of the Chief Secretary.

e) If the power plant is not operated due to high cost of gas resulting in high cost of power then around Rs.480 crores per year will be given to Karnataka Power Corporation Limited to service the debt of Rs.3712 crores. Similarly, GAIL transmission charges of Rs. 226 crores/year will be paid. Hence, the State Government shall agree to support Karnataka Power Corporation Limited to an approximate extent of Rs.706 crore per annum, besides providing guarantee for the debt, if required ;

f) To allocate the entire power generated from the Bidadi Combined Cycle Power Plant to Bangalore Electricity Supply Company (BESCOM) since the plant in near to the load centre, which could accomodate the requirement of peak load ;

g) Bangalore Electricity Supply Company may file necessary tariff petition before the Karnataka Electricity Regulatory Commission (KERC) for fixing of approximate tariff for selling the power received from this project.

2) In view of the above, KPCL had requested M/s GAIL for submitting the draft Gas Transmission Agreement (GTA), which were reviewed by Karnataka Power Corporation Limited.

3) Initially KPCL had discussions with the representatives of M/s GAIL with regard to disputed clauses and resolved certain clauses. However, with regard to the unresolved clauses it was decided to discuss under the Chairmanship of the Chief Secretary to Government of Karnataka for resolving the issues.

4) Considering the above Order, a meeting was convened on 29-10-2011 under the Chairmanship of Chief Secretary to Government of Karnataka to discuss and decide on the following issues :

a) To enter into a Gas Transportation Agreement (GTA) with GAIL for transportation of gas for 1st block of 700 MW ± 20% capacity, duly exempting Karnataka Power Corporation Limited from the KTPP Act ;

b) The decision on fixing of cap on the GAIL transmission charges shall be taken by the Committee under the Chairmanship of the Chief Secretary.

c) To procure Liquefied Natural Gas (LNG) for the first block of 700MW ± 20% through 100% on spot market basis, on continuous as & when required through GAIL/IOCL or any other organisation to be chosen by the Committee headed by the Chief Secretary to Government of Karnataka, duly exempting Karnataka Power Corporation Limited from the KTPP Act ;

5) Detailed discussions were held with the representatives of M/s. GAIL and all efforts have been made to sort-out the clauses stipulated by M/s GAIL in the Gas Transmission Agreement.

Hence the following orders :-

**GOVERNMENT ORDER NO : EN 78 PPC 2010, BANGALORE, DATED 28TH SEPTEMBER 2012**

In the circumstances explained in the Preamble, approval is accorded to :

a) To procure LNG for the first block of 700 ± 20% through 100% on spot market basis from GAIL, since the Gas Transmission Agreement is going to be executed with M/s GAIL.

b) KPCL shall approach M/s GAIL to workout the terms of reference of the Gas procurement process ;

c) The draft Gas Transmission Agreement proposed by KPCL as mutually agreed between KPCL and M/s GAIL and by including the following paras (d) to (h) below ;

d) To provide land to an extent of 2 acres 6 guntas on lease basis for an initial period of 15 years at a lease rent of Rs.100/- per acre per annum, against which KPCL would be exempted from Termination payment and Bank Guarantee to M/s GAIL ;

e) KPC Bidadi Power Corporation Limited (KPBCL) and M/s GAIL shall enter into a MOU for lease of the land to an extent of 2 acres 6 guntas ;

f) To accept the stipulation of GAIL for Ship-or-pay level at 95%, as per the draft Gas Transmission Agreement.

g) To accept the proposal of M/s GAIL for providing Letter of Credit covering 3 fortnights as per the draft Gas Transmission Agreement.

h) To incorporate the interest rate at SBI Base rate plus 6.25% per annum in the Gas Transmission Agreement, wherever applicable.

While ship or pay level of 95% may be acceptable, the required and therefore contracted quantity should be estimated based on 80% PLF. Any additional quantity required in the event of higher PLF may be obtained based on transmission capacity available at the time of the requirement.

By Order and in the name of the Governor of Karnataka

**KOUSALYA,**

Under Secretary to Government,

Energy Department.

**P.R. 2140**